KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜೂನ್ ೧, ೨೦೦೬ (ಜೇಷ್ಠ ೧೧, ಶಕ ವರ್ಷ ೧೯೨೮) | ಸಂಚಿಕೆ ೨೨ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಇಂಧನ ಸಚಿವಾಲಯ

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಅದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ದಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/08/ಎಸ್‌ಪಿಐ/2006/97 ದಿನಾಂಕ: 9.1.2006.

2) ದಿನಾಂಕ: 25.3.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ದಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: Sun Power India ಕಂಪನಿಗೆ ಬೆಳಗಾಂ ಜಿಲ್ಲೆಯಲ್ಲಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯ ಪವನ ವಿದ್ಯುತ್ ಯೋಜನೆ ಹಂಚಿಕೆಯ ಕ್ರಮ ಸಂಖ್ಯೆ: 40 ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 22 ಎನ್‌ಸಿಇ 2006, ಬೆಂಗಳೂರು, ದಿನಾಂಕ: 20ನೇ ಏಪ್ರಿಲ್ 2006**

ಮೆ:: Sun Power India ಕಂಪನಿಗೆ ಬೆಳಗಾಂ ಜಿಲ್ಲೆಯಲ್ಲಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿರುವಂತೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :

| Sl. No. | Proposed capacity in MW | Near by villages of the proposed area | Geographical area description of the project |
|---|---|---|---|
| 1 | 5 MW | Channenadaddi, Jainapur, Chikodi, Chinchani, **Belgaum district.** | The potential area of 5 MW comprises of two locations and is identified as Area-'A' and Area- 'B'.<br>**Area-'A'-(3 MW):** An East-West oriented non-contiguous ridge is located on the North-West of Chikkodi and is situated at a distance of about 1 km. It is an open scrub and has two peaks and it appears to be non-forest area. The area is covered in the following Geographical co-ordinates:<br>**Latitude**: 16°25'51"- 16°26'44" N<br>**Longitude**: 74°33'9"- 74°34'49" E<br>**Ridge peaks:** 761, 763m Amsl. |

| | | | |
|---|---|---|---|
| | | | **Area-'B'-(2 MW):** A plateau with 764m peak is located on the North-West of Channenadaddi village and situated on the South-West of Chikodi a distance about 3.5km and is a non-Forest area. The proposed area is covered in the following Geographical co-ordinates:<br>**Latitude**: 16°23'33"- 16°24'31" N<br>**Longitude**: 74°33'0"- 74°33'50" E<br>**Ridge peaks:** 764m Amsl. |
| **Total** | | **5 MW** | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

11. ಪ್ರಸ್ತುತ ಹಂಚಿಕೆ ಸಮಿತಿ ಸಭೆಯಲ್ಲಿ ಶಿಫಾರಸ್ಸು ಮಾಡಿರುವ ಕಂಪನಿಗಳಿಗೆ 2006–07 ನೇ ಸಾಲಿನಲ್ಲಿ 100 ಮೆಗಾ ವ್ಯಾಟ್‌ಗೆ ಮೀರದಂತೆ ಸಂಬಂಧಪಟ್ಟ ವಿದ್ಯುತ್ ಸರಬರಾಜು ಕಂಪನಿಗಳೊಂದಿಗೆ ಮೊದಲ ಅರ್ಜಿದಾರರಿಗೆ ಆದ್ಯತೆ ಮೇಲೆ ವಿದ್ಯುತ್ ಖರೀದಿ ಒಡಂಬಡಿಕೆಯನ್ನು (ಪಿ.ಪಿ.ಎ) ಮಾಡಿಕೊಳ್ಳತಕ್ಕದ್ದು.
12. ಎಲ್ಲಾ ಅಭಿವೃದ್ಧಿದಾರರು ಖುದ್ದಾಗಿ ಯೋಜನೆಗಳನ್ನು ಯಂತ್ರೋಪಕರಣಗಳೊಂದಿಗೆ ಅನುಷ್ಠಾನಗೊಳಿಸಬೇಕು.
13. In Area 'B' of the schedule the company has not mentioned the ownership details of the areas proposed including its encumbrances. In case, the proposed land is already enjoyed by the other party and is lawful. In such cases, the Government Order of Capacity sanctioned would be limited to 3 MW only.

ಕರ್ನಾಟಕ ರಾಜ್ಯ ಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

ಪಿ.ಆರ್. 709

## ENERGY SECRETARIAT

**Sub:** Enhancement of installed Bagasse based Co-generation Power Plant from 15 MW to 28 MW and in favour of M/s Indian Cane Power Limited-reg.

**Read:** 1) Government Letter No : DE 81 NCE 2002, dated : 1.04.2002.
2) Letter No: KRED/ 04 / ICPL / 06 / 801, dated : 10.04.2006 received from the Managing Director, Karnataka Renewable Energy Development Limited, Bangalore.

**PREAMBLE:**

In the Government letter dated : 1.04.2002 read at (1) above, "in principal clearence was given to M/s Indian Cane Power Limited for setting up 15 MW (gross) & 9 MW (exportable) Bagasse based Co-generation Power Plant at Uttur (Ranjanagi) Village, Mudhol Taluk, Bagalkot District.

The Managing Director, Karnataka Renewable Energy Development Limited, Bangalore, in his letter read at (2) above has recommended to enhance the installed capacity from 15MW (gross) and 9MW(exportable) to 28MW (gross) and 18MW (exportable) at Uttur (Ranjanagi) Village, Mudhol Taluk, Bagalkot District.

The proposal has been examined and pass the following order :

**Government Order No: EN 178 NCE 2006, Bangalore, Dated: 21st April 2006**

Government is pleased to accord sanction for the enhancement of the installed Bagasse based Co-generation Power Plant capacity from 15MW (gross) and 9MW(exportable) to 28MW (gross) and 18MW (exportable) at Uttur (Ranjanagi) Village, Mudhol Taluk, Bagalkot District in favour of M/s Indian Cane Power Limited.

The other terms and conditions of the Government letter read at (1) above shall **IPSOFACTO** applicable.

By Order and in the name of the Governor of Karnataka,
**SURESH .B. KRISHNAPPANAVAR**
Under Secretary to Government, Energy Department.

P.R. 690

## ಇಂಧನ ಸಚಿವಾಲಯ

**ವಿಷಯ:** ಮೆ:: ಶ್ರೀವಾರಿ ಪವರ್ಸ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ದೇವ್‌ದನ್ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ–ಆದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ದೇವ್‌ದನ/2005/686 ದಿನಾಂಕ: 21.3.2006.
2) ದಿನಾಂಕ: 25.3.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಶ್ರೀವಾರಿ ಪವರ್ಸ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರ ತಾಲ್ಲೂಕ್, ಬನ್ನೂರು ಗ್ರಾಮದಿಂದ ಸಾಧಾರಣ 1.5 ಕಿ.ಮಿ. ಬಳಿ ಭದ್ರಾ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ದೇವ್‌ದನ್ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯಲ್ಲಿ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆ ಪಟ್ಟಿಯ ಕ್ರಮ ಸಂಖ್ಯೆ: 13 ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 151 ಎನ್‌ಸಿಇ 2006, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2006**

ಮೆ:: ಶ್ರೀವಾರಿ ಪವರ್ಸ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರ ತಾಲ್ಲೂಕ್, ಬನ್ನೂರು ಗ್ರಾಮದಿಂದ ಸಾಧಾರಣ 1.5 ಕಿ.ಮಿ. ಬಳಿ ಭದ್ರಾ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ದೇವ್‌ದನ್ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1. (ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.
   (ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.
   (ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದ೦ತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.
   (ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.
4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.
5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.
5. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.
6. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.
7. ಜಲ ಸಂಪನ್ಮೂಲ ಇಲಾಖೆಯ ಅನುಮತಿ ಪಡೆಯಬೇಕು ಹಾಗೂ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 710

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಅದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ದಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ವಿಆರ್‌ಆರ್‌ಬಿ/2006/683 ದಿನಾಂಕ: 24.3.2006.

2) ದಿನಾಂಕ: 25.3.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ದಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: Vestas RRB (I) Limited ಕಂಪನಿಗೆ ಬೆಳಗಾಂ ಜಿಲ್ಲೆಯಲ್ಲಿ 15 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯ ಪವನ ವಿದ್ಯುತ್ ಯೋಜನೆ ಹಂಚಿಕೆಯ ಕ್ರಮ ಸಂಖ್ಯೆ: 53 ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 148 ಎನ್‌ಸಿಇ 2006, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2006**

ಮೆ:: Vestas RRB (I) Limited ಕಂಪನಿಗೆ ಬೆಳಗಾಂ ಜಿಲ್ಲೆಯಲ್ಲಿ 15 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿರುವಂತೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :

| Sl. No. | Proposed capacity in MW | Near by villages of the proposed area | Geographical area description of the project |
|---|---|---|---|
| 1 | 15 MW | Ammangi, Yalimunnoli, Hanjanahatti, Belvi, **Belgaum district.** | Identified area comprises of high plains oriented in North-South and East-West directions. These plains appears to be are non-Forest and are located close by the villages mentioned under column (4). The total area has several peaks and is covered in the following Geographical co-ordinates:<br>**Latitude**: 16°15'0"- 16°18'7" N<br>**Longitude**: 74°33'14"- 74°38'23" E<br>**Ridge peaks:** 718, 721, 772, 715, 708, 721, 722, 719, 677m Amsl. |
| **Total** | | **15 MW** | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇ ಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ ಕಂದಾಯ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.

9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ದಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಪ್ರಸ್ತುತ ಹಂಚಿಕೆ ಸಮಿತಿ ಸಭೆಯಲ್ಲಿ ಶಿಫಾರಸ್ಸು ಮಾಡಿರುವ ಕಂಪನಿಗಳಿಗೆ 2006–07 ನೇ ಸಾಲಿನಲ್ಲಿ 100 ಮೆಗಾ ವ್ಯಾಟ್‌ಗೆ ಮೀರದಂತೆ ಸಂಬಂಧಪಟ್ಟ ವಿದ್ಯುತ್ ಸರಬರಾಜು ಕಂಪನಿಗಳೊಂದಿಗೆ ಮೊದಲ ಅರ್ಜಿದಾರರಿಗೆ ಆದ್ಯತೆ ಮೇಲೆ ವಿದ್ಯುತ್ ಖರೀದಿ ಒಡಂಬಡಿಕೆಯನ್ನು (ಪಿ.ಪಿ.ಎ) ಮಾಡಿಕೊಳ್ಳತಕ್ಕದ್ದು.
12. ಎಲ್ಲಾ ಅಭಿವೃದ್ಧಿದಾರರು ಖುದ್ದಾಗಿ ಯೋಜನೆಗಳನ್ನು ಯಂತ್ರೋಪಕರಣಗಳೊಂದಿಗೆ ಅನುಷ್ಠಾನಗೊಳಿಸಬೇಕು.

ಕರ್ನಾಟಕ ರಾಜ್ಯ ಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 716

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಅದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ದಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಎಎಂಟಿಎಲ್/2006/204 ದಿನಾಂಕ: 20.1.2006.

2) ದಿನಾಂಕ: 25.3.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ದಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: Arul Mariamman Textiles Limited ಕಂಪನಿಗೆ ಚಿತ್ರದುರ್ಗ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಒಟ್ಟು 6.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯ ಪವನ ವಿದ್ಯುತ್ ಯೋಜನೆ ಹಂಚಿಕೆಯ ಕ್ರಮ ಸಂಖ್ಯೆ: 36 ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 43 ಎನ್‌ಸಿಇ 2006, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2006**

ಮೆ:: Arul Mariamman Textiles Limited ಕಂಪನಿಗೆ ಚಿತ್ರದುರ್ಗ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಒಟ್ಟು 6.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿರುವಂತೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :

| Sl. No. | Proposed capacity in MW | Near by villages of the proposed area and district | Geographical area description of the project |
|---|---|---|---|
| 1 | 5 MW<br><br>(20 X 250 kW) | Bommanahalli, Hosagudda, **Chitradurga district.** | The identified area is a plain terrain with gentle elevation varying from 648-720 Mtrs. The potential area is spread across 3 villages and has several peaks. And the identified area is earmarked in the circular fashion which is held in the following Geographical co-ordinates:<br>**Latitude**: 14°20’54”- 14°24’16” N<br>**Longitude**: 76°30’9”- 76°34’7” E<br>**Ridge peaks:** 713, 714, 692, 648, 670m Amsl. |
| 2 | 1.5 MW<br><br>(6 X 250 kW) | Maidur, Kamalapur, Hallur, **Haveri district.** | A small hillock oriented in NW-SE direction situated on the North of Maidur and has a open scrub feature. It is held in the following Geographical co-ordinates:<br>**Latitude**: 14°19’13”- 14°20’11” N<br>**Longitude**: 75°34’33”- 75°37’19” E<br>**Ridge peaks:** 704, 706m Amsl. |
| **Total** | | **6.5 MW** | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.

3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇ ಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ ಕಂದಾಯ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಪ್ರಸ್ತುತ ಹಂಚಿಕೆ ಸಮಿತಿ ಸಭೆಯಲ್ಲಿ ಶಿಫಾರಸ್ಸು ಮಾಡಿರುವ ಕಂಪನಿಗಳಿಗೆ 2006–07 ನೇ ಸಾಲಿನಲ್ಲಿ 100 ಮೆಗಾ ವ್ಯಾಟ್‌ಗೆ ಮೀರದಂತೆ ಸಂಬಂಧಪಟ್ಟ ವಿದ್ಯುತ್ ಸರಬರಾಜು ಕಂಪನಿಗಳೊಂದಿಗೆ ಮೊದಲ ಅರ್ಜಿದಾರರಿಗೆ ಆದ್ಯತೆ ಮೇಲೆ ವಿದ್ಯುತ್ ಖರೀದಿ ಒಡಂಬಡಿಕೆಯನ್ನು (ಪಿ.ಪಿ.ಎ) ಮಾಡಿಕೊಳ್ಳತಕ್ಕದ್ದು.
12. ಎಲ್ಲಾ ಅಭಿವೃದ್ಧಿದಾರರು ಖುದ್ದಾಗಿ ಯೋಜನೆಗಳನ್ನು ಯಂತ್ರೋಪಕರಣಗಳೊಂದಿಗೆ ಅನುಷ್ಠಾನಗೊಳಿಸಬೇಕು.

ಕರ್ನಾಟಕ ರಾಜ್ಯ ಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 724

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಆದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/08/ಎಂಐಸಿ/2005/104 ದಿನಾಂಕ: 28.12.2005.

2) ದಿನಾಂಕ: 25.3.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: Marudhavel Industries Limited ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯಲ್ಲಿ 5.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯ ಪವನ ವಿದ್ಯುತ್ ಯೋಜನೆ ಹಂಚಿಕೆಯ ಕ್ರಮ ಸಂಖ್ಯೆ: 46 ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 48 ಎನ್‌ಸಿಇ 2006, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2006**

ಮೆ:: Marudhavel Industries Limited ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯಲ್ಲಿ 5.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿರುವಂತೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ:

| Sl. No. | Proposed capacity in MW | Near by villages of the proposed area | Geographical area description of the project |
|---|---|---|---|
| 1 | 5.25 MW<br><br>(7 X 750 kW) | Nandi, Lingadahalli, Chikmagalur district. | A small ridge with elevation of 1044m peak is located on the North-East of Lingadahalli and the external features of the area as per topomap is in fairly dense scrub. This area is held in the following Geographical co-ordinates:<br>**Latitude**: 13°36'15"- 13°37'55" N<br>**Longitude**: 75°51'13"- 75°51'47" E<br>**Ridge peaks:** 1044m Amsl |
| **Total** | | **5.25 MW** | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇ ಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ ಕಂದಾಯ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.

8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಪ್ರಸ್ತುತ ಹಂಚಿಕೆ ಸಮಿತಿ ಸಭೆಯಲ್ಲಿ ಶಿಫಾರಸ್ಸು ಮಾಡಿರುವ ಕಂಪನಿಗಳಿಗೆ 2006–07 ನೇ ಸಾಲಿನಲ್ಲಿ 100 ಮೆಗಾ ವ್ಯಾಟ್‌ಗೆ ಮೀರದಂತೆ ಸಂಬಂಧಪಟ್ಟ ವಿದ್ಯುತ್ ಸರಬರಾಜು ಕಂಪನಿಗಳೊಂದಿಗೆ ಮೊದಲ ಅರ್ಜಿದಾರರಿಗೆ ಆದ್ಯತೆ ಮೇಲೆ ವಿದ್ಯುತ್ ಖರೀದಿ ಒಡಂಬಡಿಕೆಯನ್ನು (ಪಿ.ಪಿ.ಎ) ಮಾಡಿಕೊಳ್ಳತಕ್ಕದ್ದು.
12. ಎಲ್ಲಾ ಅಭಿವೃದ್ಧಿದಾರರು ಖುದ್ದಾಗಿ ಯೋಜನೆಗಳನ್ನು ಯಂತ್ರೋಪಕರಣಗಳೊಂದಿಗೆ ಅನುಷ್ಠಾನಗೊಳಿಸಬೇಕು.

ಕರ್ನಾಟಕ ರಾಜ್ಯ ಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 725

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಅದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ವಿಎಸ್‌ಡಬ್ಲ್ಯುಪಿಪಿಎಲ್/2006/223 ದಿನಾಂಕ: 23.1.2006.

2) ದಿನಾಂಕ: 25.3.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: Vaayu Shakthi Wind Power (P) Limited ಕಂಪನಿಗೆ ಕೊಪ್ಪಳ ಜಿಲ್ಲೆಯಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯ ಪವನ ವಿದ್ಯುತ್ ಯೋಜನೆ ಹಂಚಿಕೆಯ ಕ್ರಮ ಸಂಖ್ಯೆ: 42 ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 65 ಎನ್‌ಸಿಇ 2006, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2006**

ಮೆ:: Vaayu Shakthi Wind Power (P) Limited ಕಂಪನಿಗೆ ಕೊಪ್ಪಳ ಜಿಲ್ಲೆಯಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿರುವಂತೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :

| Sl. No. | Proposed capacity in MW | Near by villages of the proposed area | Geographical area description of the project |
|---|---|---|---|
| 1 | 1.5 MW | Hanumasagar, Koppal District. | A North-south oriented plateau situated on the North of Hanumasagar town has 728 m peak. It is a private land as per the MOU furnished by the applicant. The potential area is held in the following geographical coordinates:<br>**Latitude**: 15°52'26"- 15°53'7" N<br>**Longitude**: 76°2'21"- 76°2'46" E<br>**Ridge peaks:** 728 m Amsl. |
| **Total** | | **1.5 MW** | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ

ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇ ಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.

4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ ಕಂದಾಯ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಪ್ರಸ್ತುತ ಹಂಚಿಕೆ ಸಮಿತಿ ಸಭೆಯಲ್ಲಿ ಶಿಫಾರಸ್ಸು ಮಾಡಿರುವ ಕಂಪನಿಗಳಿಗೆ 2006-07 ನೇ ಸಾಲಿನಲ್ಲಿ 100 ಮೆಗಾ ವ್ಯಾಟ್‌ಗೆ ಮೀರದಂತೆ ಸಂಬಂಧಪಟ್ಟ ವಿದ್ಯುತ್ ಸರಬರಾಜು ಕಂಪನಿಗಳೊಂದಿಗೆ ಮೊದಲ ಅರ್ಜಿದಾರರಿಗೆ ಆದ್ಯತೆ ಮೇಲೆ ವಿದ್ಯುತ್ ಖರೀದಿ ಒಡಂಬಡಿಕೆಯನ್ನು (ಪಿ.ಪಿ.ಎ) ಮಾಡಿಕೊಳ್ಳತಕ್ಕದ್ದು.
12. ಎಲ್ಲಾ ಅಭಿವೃದ್ಧಿದಾರರು ಖುದ್ದಾಗಿ ಯೋಜನೆಗಳನ್ನು ಯಂತ್ರೋಪಕರಣಗಳೊಂದಿಗೆ ಅನುಷ್ಠಾನಗೊಳಿಸಬೇಕು.

ಕರ್ನಾಟಕ ರಾಜ್ಯ ಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 726

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ವಿಜ್ಞಾನ ಮತ್ತು ತಂತ್ರಜ್ಞಾನ ವಲಯಕ್ಕೆ ಸಂಬಂಧಿಸಿದ ಮುಂದುವರಿದ ಯೋಜನೆಯನ್ನು 2006-07ನೇ ಸಾಲಿಗೆ (ದಿನಾಂಕ: 01/04/2006 ರಿಂದ ದಿ:31/03/2007ರ ಅವಧಿಗೆ) ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ.ವಿಯಇ 80 ವಿತ್ರಮ 2004, ದಿನಾಂಕ: 30/05/2005.

2) ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ:26/04/2005 ರಂದು ನಡೆದ ಸಭೆಯ ನಡವಳಿ ಸಂಖ್ಯೆ: ಐಟಿಡಿ 33 ಅಡವಿ 2006. ದಿನಾಂಕ:27.04.2006

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿನ ಸರ್ಕಾರಿ ಆದೇಶದಲ್ಲಿ ಆರ್ಥಿಕ ಇಲಾಖೆಯಿಂದ ಒದಗಿಸಲಾದ ರೂ.1251.00 ಲಕ್ಷ ರೂ.ಗಳ ಪೈಕಿ ರೂ.858.00ಲಕ್ಷಗಳನ್ನು ಈ ಇಲಾಖೆಯ ಕಾರ್ಯಚಟುವಟಿಕೆಗಳಿಗೆ ಹಾಗೂ ಯೋಜನೆಗಳಿಗೆ 2005-06ನೇ ಸಾಲಿನಲ್ಲಿ ಸದುಪಯೋಗ ಪಡಿಸಿಕೊಳ್ಳಲಾಗಿದೆ.

ಮೇಲೆ ಓದಲಾದ (2)ರಲ್ಲಿನ ನಡವಳಿಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ವಲಯಕ್ಕೆ ಸಂಬಂಧಿಸಿದಂತೆ, ಈ ಕೆಳಕಂಡ ಯೋಜನೆಗಳನ್ನು 2006-07ನೆ ಸಾಲಿಗೆ ಮುಂದುವರೆಸಲು ತೀರ್ಮಾನಿಸಿದೆ.

01) ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರ ವಿದ್ಯಾ ಮಂಡಳಿಗೆ-ಸಹಾಯಾನುದಾನ
02) ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್‌ಗೆ-ಸಹಾಯಾನುದಾನ
03) ಜವಹರ್ ಲಾಲ್ ನೆಹರು ತಾರಾಲಯಕ್ಕೆ(ಬೇಸ್)-ಸಹಾಯಾನುದಾನ
04) ಇತರೆ ವೈಜ್ಞಾನಿಕ ಸಂಸ್ಥೆಗಳಿಗೆ -ಸಹಾಯಾನುದಾನ
05) ಇತರೆ ವೈಜ್ಞಾನಿಕ ಕಾರ್ಯಚಟುವಟಿಕೆಗಳಿಗೆ-ಸಹಾಯಾನುದಾನ
06) ವಿಜ್ಞಾನ ನಗರ (ಧಾರವಾಡ)ಕ್ಕೆ-ಆವರ್ತಕ ವೆಚ್ಚ
07) ಪ್ರಾದೇಶಿಕ ವಿಜ್ಞಾನ ಕೇಂದ್ರ ಪಿಲಿಕುಳಕ್ಕೆ(ಮಂಗಳೂರು)-ಆವರ್ತಕ ವೆಚ್ಚ
08) ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರ, ಹಾವೇರಿಗೆ-ಆವರ್ತಕ ವೆಚ್ಚ
09) ಬರ ಪರಿಹಾರ ಉಸ್ತುವಾರಿ ಕೋಶಕ್ಕೆ - ಸಹಾಯಾನುದಾನ
10) ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು-ಅಂಶದಾನ
11) ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿಗೆ ಸಹಾಯಾನುದಾನ
12) ವಿಜ್ಞಾನ ಮತ್ತು ತಂತ್ರಜ್ಞಾನದ ಇತರೆ ಯೋಜನೆಗಳಿಗೆ ಸಹಾಯಾನುದಾನ

ಮೇಲ್ಕಾಣಿಸಿದ ತೀರ್ಮಾನದ ಪ್ರಕಾರ ಈ ಕೆಳಕಂಡ ಆದೇಶ,

**ಸರ್ಕಾರಿ ಆದೇಶ ಸಂಖ್ಯೆ ವಿಯಇ 123 ವಿತ್ರಮ 2005, ಬೆಂಗಳೂರು, ದಿನಾಂಕ: 29ನೇ ಏಪ್ರಿಲ್ 2006**

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ವಿಜ್ಞಾನ ಮತ್ತು ತಂತ್ರಜ್ಞಾನ ವಲಯದಲ್ಲಿ ಚಾಲ್ತಿಯಲ್ಲಿರುವ ಅನುಬಂಧದಲ್ಲಿ ಸೂಚಿಸಿರುವ ಯೋಜನೆಗಳನ್ನು 2006-07ನೇ ಸಾಲಿಗೆ (ದಿನಾಂಕ:01/04/2006 ರಿಂದ 31/03/2007 ರವರೆಗೆ) ಮುಂದುವರೆಸಿ, ಅವುಗಳಿಗೆ ಅವುಗಳ ಮುಂದೆ ಸೂಚಿಸಿರುವ ಅನುದಾನವನ್ನು ಮಂಜೂರು ಮಾಡಲಾಗಿದ್ದು, ಅ ಪೈಕಿ ಮಂಡಳಿ, ಪರಿಷತ್ತು, ತಾರಾಲಯ, ಬರ ಪರಿಹಾರ ಉಸ್ತುವಾರಿ ಕೋಶ ಮತ್ತು ಅಕಾಡೆಮಿಗಳಿಗೆ ಕಂತುಗಳ ರೂಪದಲ್ಲಿ ಅನುದಾನವನ್ನು (ಹಣ) ಬಿಡುಗಡೆ ಮಾಡಲು ಸರ್ಕಾರವು ಅದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ವಿ. ಸತ್ಯನಾರಾಯಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು
ತಂತ್ರಜ್ಞಾನ ಇಲಾಖೆ, (ವಿಜ್ಞಾನ ಮತ್ತು ತಂತ್ರಜ್ಞಾನ)

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 123 ವಿತ್ರಮ 2005, ಬೆಂಗಳೂರು, ದಿನಾಂಕ: 29/04/2006**

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಲೆಕ್ಕ ಶೀರ್ಷಿಕೆ | ಯೋಜನೆಗಳಿಗೆ/ಸಂಸ್ಥೆಗಳಿಗೆ/ಚಟುವಟಿಕೆಗಳಿಗೆ ಸಹಾಯಾನುದಾನ ವಿವರ | ಆಯವ್ಯಯ ದಲ್ಲಿನ ಹಂಚಿಕೆ | ಇಲಾಖೆಯ ಹಂಚಿಕೆ |
|---|---|---|---|---|
| 01 | 3425-60-200-0-01-(101) (ಯೋ) | **ವೈಜ್ಞಾನಿಕ ಸಂಸ್ಥೆಗಳಿಗೆ ಸಹಾಯಾನುದಾನ** | 250 | - |
| | | **ಮುಂದುವರೆದ ಯೋಜನೆಗಳು:** | | |
| | | 1) ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿ | | 25.00 |
| | | 2) NRDMS ಯೋಜನೆಗೆ | | 10.00 |
| | | 3) ವಿಜ್ಞಾನಿಗಳಿಗೆ ಪ್ರಶಸ್ತಿ ಹಾಗೂ ಅದರ ಸಮಾರಂಭಕ್ಕೆ | | 06.00 |
| | | 4) ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು | | 12.00 |
| | | 5) ಯುವ ವಿಜ್ಞಾನಿಗಳಿಗೆ ಪ್ರಶಸ್ತಿ ನೀಡುವ ಬಗ್ಗೆ | | 03.00 |
| | | 6) ಜಿಲ್ಲಾ ವಿಜ್ಞಾನ ಕೇಂದ್ರಗಳಿಗೆ ಸಹಾಯಾನುದಾನ. | | 10.00 |
| | | 7) ರಾಷ್ಟ್ರೀಯ ಮಕ್ಕಳ ವಿಜ್ಞಾನ ಸಮಾವೇಶ. | | 04.00 |
| | | 8) ವಿಜ್ಞಾನ ಭವನ, ಬೆಂಗಳೂರು. | | 10.00 |
| | | 9) ಜವಹರ್‌ಲಾಲ್ ನೆಹರು ತಾರಾಲಯ | | 15.00 |
| | | 10) ಇತರೆ ವೈಜ್ಞಾನಿಕ ಸಂಸ್ಥೆಗಳಿಗೆ/ಇತರೆ ವೈಜ್ಞಾನಿಕ ಚಟುವಟಿಕೆಗಳಿಗೆ/ಸಂಬಂದಿತ ಚಟುವಟಿಕೆಗಳಿಗೆ | | 75.00 |
| | | 11) ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿಯ ಕಾರ್ಯ ಚಟುವಟಿಕೆ ಮತ್ತು ಆಡಳಿತ ನಿರ್ವಹಣೆ | | 50.00 |
| | | 12) ಪ್ರಾದೇಶಿಕ ವಿಜ್ಞಾನ ಕೇಂದ್ರ, ಪಿಲಿಕುಳ-ಆವರ್ತಕ ವೆಚ್ಚ | | 25.00 |
| | | 13) ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರ, ಹಾವೇರಿ-ಆವರ್ತಕ ವೆಚ್ಚ | | 05.00 |
| | | **ಒಟ್ಟು** | **250.00** | **250.00** |

| ಕ್ರ. ಸಂ. | ಲೆಕ್ಕ ಶೀರ್ಷಿಕೆ | ಯೋಜನೆಗಳಿಗೆ/ಸಂಸ್ಥೆಗಳಿಗೆ/ಚಟುವಟಿಕೆಗಳಿಗೆ ಸಹಾಯಾನುದಾನ ವಿವರ | ಆಯವ್ಯಯ ದಲ್ಲಿನ ಹಂಚಿಕೆ | ಇಲಾಖೆಯ ಹಂಚಿಕೆ |
|---|---|---|---|---|
| 02 | 3425-60-200-0-01-(104)(ಅಂಶದಾನ ಯೋಜನೇತರ) | ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು | 01.00 | 01.00 (NP) |
| 03 | 3425-60-600-0-01 (059) | ಪ್ರಾದೇಶಿಕ ವಿಜ್ಞಾನ ಕೇಂದ್ರ, ಧಾರವಾಡ | *100.00 | 25.00 |
| 04 | 3455-00-200-0-01 (059) | ಬರ ಪರಿಹಾರ ಉಸ್ತುವಾರಿ ಕೋಶ | 50.00 | 50.00 |
| | | ಒಟ್ಟು ಮೊತ್ತ | 401.00 | 326.00 |

* ಪ್ರಾದೇಶಿಕ ವಿಜ್ಞಾನ ಕೇಂದ್ರ ಧಾರವಾಡಕ್ಕೆ ಈ ಸಾಲಿನಲ್ಲಿ ರೂ.100.00 ಲಕ್ಷಗಳನ್ನು ಕಲ್ಪಿಸಲಾಗಿದೆ, ಆದರೆ ಈ ಯೋಜನೆಗೆ ಈಗಾಗಲೆ ರಾಜ್ಯ ಸರ್ಕಾರವು ನೀಡಬೇಕಾದ ರೂ.325.00 ಲಕ್ಷಗಳನ್ನು ನೀಡಿದ್ದರಿಂದ, ಈ ಯೋಜನೆಗೆ ಆಯವ್ಯಯದಲ್ಲಿ ನೀಡಿದ ರೂ.100.00ಲಕ್ಷಗಳ ಪೈಕಿ ರೂ.25.00 ಲಕ್ಷಗಳನ್ನು ಮಾತ್ರ ಆವರ್ತಕ ವೆಚ್ಚಕ್ಕಾಗಿ ಉಳಿಸಿಕೊಂಡು, ಉಳಿದ ರೂ.75.00 ಲಕ್ಷಗಳನ್ನು ಮರುಹೊಂದಾಣಿಕೆ ಮೂಲಕ ಹೊಸ ಯೋಜನೆಗಳಿಗೆ ಉಪಯೋಗಿಸಿಕೊಳ್ಳುವ ಕುರಿತು ಸೂಕ್ತ ಪ್ರಸ್ತಾವನೆಯನ್ನು ಆರ್ಥಿಕ ಮತ್ತು ಯೋಜನಾ ಇಲಾಖೆಗಳಿಗೆ ಸಕಾಲದಲ್ಲಿ ಸಲ್ಲಿಸಲಾಗುವುದು.

**ಎಸ್.ವಿ. ಸತ್ಯನಾರಾಯಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 717 ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಕಡಿಮೆ ಕೆಲಸ ಒತ್ತಡವಿರುವ ಮದ್ದೂರು ಉಪ ನೋಂದಣಿ ಕಛೇರಿಯಲ್ಲಿಯ ಉಪ ನೋಂದಣಾಧಿಕಾರಿ ಹುದ್ದೆಯನ್ನು ಹೆಚ್ಚಿನ ಕೆಲಸದ ಒತ್ತಡವಿರುವ ಮಂಡ್ಯ ಉಪ ನೋಂದಣಿ ಕಛೇರಿಗೆ ಸ್ಥಳಾಂತರಿಸುವ ಕುರಿತು ಪ್ರಸ್ತಾವನೆ.

**ಓದಲಾಗಿದೆ:** 1) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಪತ್ರ ಸಂಖ್ಯೆ:ಸಿಬ್ಬಂದಿ 1-97/05-06, ದಿನಾಂಕ:10-02-2006.

2) ಸರ್ಕಾರಿ ಆದೇಶ ಸಂಖ್ಯೆ:ಕಂಇ 20 ಮುನೊಸೇ(3) 2001, ದಿನಾಂಕ: 08-06-2001.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ರವರು ಪ್ರಸ್ತಾವನೆ ಸಲ್ಲಿಸಿ ಮದ್ದೂರು ಉಪ ನೋಂದಣಿ ಕಛೇರಿಯಲ್ಲಿ ಎರಡು ಉಪ ನೋಂದಣಾಧಿಕಾರಿಗಳ ಹುದ್ದೆಯಿದ್ದು, ಇಲ್ಲಿ ಕೆಲಸದ ಒತ್ತಡ ಕಡಿಮೆ ಇರುತ್ತದೆ. ಆದರೆ ಉಪ ನೋಂದಣಿ ಕಛೇರಿ ಮಂಡ್ಯ ಇಲ್ಲಿ ಅತಿ ಹೆಚ್ಚಿನ ದಸ್ತಾವೇಜುಗಳ ನೋಂದಾಗುವುದರಿಂದ ಹಾಗೂ ಹೆಚ್ಚು ಋಣಭಾರ ಪತ್ರಗಳ ಅರ್ಜಿಗಳು ಬರುವುದರಿಂದ ಹಾಗೂ ಇನ್ನೂ ಅನೇಕ ಕೆಲಸಗಳು ಹೆಚ್ಚಿಗೆ ಇರುವುದರಿಂದ ಸದರಿ ಕಛೇರಿಯಲ್ಲಿ ಒಂದೇ ಉಪ ನೋಂದಣಾಧಿಕಾರಿ ಹುದ್ದೆ ಇದ್ದು, ಉಪ ನೋಂದಣಾಧಿಕಾರಿಗಳಿಂದ ಎಲ್ಲಾ ಕಡೆ ನಿಗಾ ವಹಿಸಿ ಸುಸೂತ್ರವಾಗಿ ಕೆಲಸ ನಿರ್ವಹಿಸಲು ಸಾಧ್ಯವಾಗುತ್ತಿಲ್ಲವಾದ್ದರಿಂದ ಕೆಲಸ ಕಡಿಮೆ ಇರುವ ಉಪ ನೋಂದಣಿ ಕಛೇರಿಯಲ್ಲಿ ಒಂದು ಹೆಚ್ಚುವರಿ ಉಪ ನೋಂದಣಾಧಿಕಾರಿ ಹುದ್ದೆಯನ್ನು ಮಂಡ್ಯ ಉಪ ನೋಂದಣಾಧಿಕಾರಿ ಕಛೇರಿಗೆ ಸ್ಥಳಾಂತರಿಸಲು ಕೋರಿದ್ದಾರೆ. ಈ ಹಿಂದೆ ಸರ್ಕಾರವು ಓದಲಾದ (2) ರ ಪ್ರಕಾರ ಒಂದು ಉಪ ನೋಂದಣಾಧಿಕಾರಿ ಹುದ್ದೆಯನ್ನು ಉಪ ನೋಂದಣಿ ಕಛೇರಿ, ಮದ್ದೂರು ಇಲ್ಲಿಗೆ ಹೆಚ್ಚುವರಿ ಉಪ ನೋಂದಣಾಧಿಕಾರಿ ಹುದ್ದೆಯನ್ನಾಗಿ ದಿನಾಂಕ:08-06-2001 ರಲ್ಲಿ ಸೃಜಿಸಲಾಗಿತ್ತು. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರ ಪ್ರಸ್ತಾವನೆ ಪರಿಶೀಲಿಸಿ ಓದಲಾದ (2) ರಲ್ಲಿ ಸೃಜಿಸಲಾದ ಹೆಚ್ಚುವರಿ ಉಪ ನೋಂದಣಾಧಿಕಾರಿ ಹುದ್ದೆಯನ್ನು ಮಂಡ್ಯ ಉಪ ನೋಂದಣಾಧಿಕಾರಿ ಕಛೇರಿಗೆ ಸ್ಥಳಾಂತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 15 ಮುನೊಸೇ(2) 2006, ಬೆಂಗಳೂರು, ದಿನಾಂಕ: 24ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಕ್ಕೆ ರಾಜಸ್ವವನ್ನು ಹೆಚ್ಚಿಸುವ ಹಾಗೂ ಸಾರ್ವಜನಿಕರಿಗೆ ಆಡಳಿತ ಅನುಕೂಲ ಹೆಚ್ಚಿಸುವ ದೃಷ್ಟಿಯಿಂದ ಮದ್ದೂರು ಉಪ ನೋಂದಣಿ ಕಛೇರಿಯಲ್ಲಿ ಹಾಲಿ ಖಾಲಿ ಇರುವ ಒಂದು ಅಧಿಕ ಉಪ ನೋಂದಣಾಧಿಕಾರಿಗಳ ಹುದ್ದೆಯನ್ನು ಮಂಡ್ಯ ಉಪ ನೋಂದಣಿ ಕಛೇರಿಗೆ ಅಧಿಕ ಉಪ ನೋಂದಣಾಧಿಕಾರಿ ಹುದ್ದೆಯನ್ನು ಸ್ಥಳಾಂತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪಿ.ಆರ್. 697 ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಶ್ರೀ ಶಂಕರ ಸೇವಾ ಸಮಿತಿ, ರಾಜಾಜಿನಗರ, ಬೆಂಗಳೂರು, ಈ ಸಮಿತಿಗೆ ಆಡಳಿತಾಧಿಕಾರಿ ನೇಮಕ ಕುರಿತು.

**ಓದಲಾಗಿದೆ:** 1) ಜಿಲ್ಲಾ ನೋಂದಣಾಧಿಕಾರಿಗಳ ಪತ್ರ ಸಂಖ್ಯೆ: 157/69–70, ದಿನಾಂಕ:28–06–2005.
2) ಕಾರಣ ಕೇಳುವ ನೋಟೀಸ್ ಸಂಖ್ಯೆ:ಕಂಇ 29 ಮುನೊಸೊ 2005, ದಿನಾಂಕ:23–07–2007.
3) ಗೌರವ ಕಾರ್ಯದರ್ಶಿ, ಶ್ರೀ ಶಂಕರ ಸೇವಾ ಸಮಿತಿ, ರಾಜಾಜಿನಗರ, ಇವರ ಲಿಖಿತ ಹೇಳಿಕೆ ದಿನಾಂಕ:26–08–2005.

**ಪ್ರಸ್ತಾವನೆ:**

ಮೇಲೆ ಓದಲಾದ ಜಿಲ್ಲಾ ನೋಂದಣಾಧಿಕಾರಿಗಳ ಪತ್ರದಲ್ಲಿ ಶ್ರೀ ಶಂಕರ ಸೇವಾ ಸಮಿತಿ, ರಾಜಾಜಿನಗರ, ಈ ಸಂಸ್ಥೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರನ್ವಯ ನೋಂದಾಯಿಸಲಾಗಿದ್ದು, ನೋಂದಣಿ ಸಂಖ್ಯೆ:157/69–70 ಇರುತ್ತದೆ. ಸಂಘವು ಬೈಲಾ ನಿಯಮಗಳ ಉಲ್ಲಂಘನೆ ಹಾಗೂ ಸಂಘದ ಕಾರ್ಯನಿರ್ವಹಣೆ ಬಗ್ಗೆ ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 93444/05 ರಲ್ಲಿ ನೀಡಿದ ತೀರ್ಪಿನನ್ವಯ ಸದರಿ ಸಂಘವನ್ನು ಕುರಿತು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 25 ರ ಪ್ರಕಾರ ವಿಚಾರಣೆ ನಡೆಸಿ ವರದಿ ನೀಡುತ್ತಾ, ಸಂಘದ ಎಲ್ಲ ಸದಸ್ಯರುಗಳು ನಿಯಮಾನುಸಾರ ಸಂಘದ ಸದಸ್ಯತ್ವವನ್ನು ಪಡೆದಿರುವುದಿಲ್ಲ. ಸದಸ್ಯತ್ವದ ದಾಖಲೆ ಇಟ್ಟಿರುವುದಿಲ್ಲವಾದ್ದರಿಂದ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ಕಲಂ 27–ಎ ರ ಪ್ರಕಾರ ಆಡಳಿತಾಧಿಕಾರಿಯನ್ನು ನೇಮಕ ಮಾಡುವಂತೆ ಜಿಲ್ಲಾ ನೋಂದಣಾಧಿಕಾರಿಗಳು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಜಿಲ್ಲಾ ನೋಂದಣಾಧಿಕಾರಿ ವರದಿಯನ್ನು ಪರಿಶೀಲಿಸಿ ಈ ಕುರಿತು ಸಂಘಕ್ಕೆ ಓದಲಾದ (2) ರ ಪ್ರಕಾರ ಕಾರಣ ಕೇಳುವ ನೋಟೀಸನ್ನು ಜಾರಿಮಾಡಲಾಯಿತು. ಓದಲಾದ (3) ರ ಪ್ರಕಾರ ಸಂಘದ ಗೌರವ ಕಾರ್ಯದರ್ಶಿ ಸರ್ಕಾರಕ್ಕೆ ಲಿಖಿತ ಹೇಳಿಕೆ ನೀಡಿ ಜಿಲ್ಲಾ ನೋಂದಣಾಧಿಕಾರಿಗಳ ಶಿಫಾರಸ್ಸನ್ನು ತಿರಸ್ಕರಿಸಿ ಸಮಿತಿಯನ್ನು ಮುಂದುವರೆಸಲು ಅವಕಾಶ ಮಾಡಿಕೊಡಲು ಕೋರಿದ್ದನ್ನು ಹಾಗೂ ಜಿಲ್ಲಾ ನೋಂದಣಾಧಿಕಾರಿ ಶಿಫಾರಸ್ಸನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಸಂಸ್ಥೆಯನ್ನು ಸರಿದಾರಿಗೆ ತರುವ ದೃಷ್ಟಿಯಿಂದ ಆಡಳಿತಾಧಿಕಾರಿ ನೇಮಕ ಮಾಡಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 29 ಮುನೊಸೊ 2005, ಬೆಂಗಳೂರು ದಿನಾಂಕ: 26ನೇ ಏಪ್ರಿಲ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಾರ್ವಜನಿಕ ಹಿತದೃಷ್ಟಿಯಿಂದ ಶ್ರೀ ಶಂಕರ ಸೇವಾ ಸಮಿತಿ, ರಾಜಾಜಿನಗರ, ಬೆಂಗಳೂರು, ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27–ಎ ಪ್ರಕಾರ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಉಪ ವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಇವರನ್ನು ಆಡಳಿತಾಧಿಕಾರಿಯನ್ನಾಗಿ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ, ಇದರಲ್ಲಿ ಯಾವುದು ಮೊದಲೊ ಅಲ್ಲಿಯವರೆಗೆ ನೇಮಿಸಿದೆ.

ಆಡಳಿತಾಧಿಕಾರಿಗಳು ಈ ಅವಧಿಯಲ್ಲಿ ಸಂಘದ ಅವ್ಯವಹಾರಗಳನ್ನು ಸರಿಪಡಿಸಿ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಿವಲಿಂಗ**
ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 698

**ವಿಷಯ:** ಡಾ:ಬಿ.ಆರ್.ಅಂಬೇಡ್ಕರ್ ವಿದ್ಯಾ ಸಂಸ್ಥೆ (ರಿ), ಧರ್ಮಪುರ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಈ ಸಂಸ್ಥೆಯನ್ನು ವಿಸರ್ಜಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ:ಕಂಇ 15 ಮುನೊಸೊ 2002, ದಿನಾಂಕ:08–01–2003.
2) ಉಪ ವಿಭಾಗಾಧಿಕಾರಿಗಳು, ಚಿತ್ರದುರ್ಗ ಉಪ ವಿಭಾಗ, ಮತ್ತು ಆಡಳಿತಾಧಿಕಾರಿಗಳು, ಡಾ:ಬಿ.ಆರ್.ಅಂಬೇಡ್ಕರ್ ವಿದ್ಯಾ ಸಂಸ್ಥೆ (ರಿ), ಧರ್ಮಪುರ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ರವರ ಪತ್ರ ಸಂಖ್ಯೆ:ಸಂಕೀರ್ಣ/ಸಿಆರ್/5/03–04, ದಿನಾಂಕ:22–12–2005.
3) ಜಿಲ್ಲಾ ನೋಂದಣಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಪತ್ರ ಸಂಖ್ಯೆ: ಎಸ್.ಒ.ಆರ್,15–86–87, ದಿನಾಂಕ:16–01–2006.

**ಪ್ರಸ್ತಾವನೆ;**

ಮೇಲೆ ಓದಲಾದ (1) ರ ಸರ್ಕಾರಿ ಆದೇಶದಲ್ಲಿ ಡಾ:ಬಿ.ಆರ್.ಅಂಬೇಡ್ಕರ್ ವಿದ್ಯಾ ಸಂಸ್ಥೆ (ರಿ), ಧರ್ಮಪುರ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಈ ಸಂಸ್ಥೆಯಲ್ಲಿ ಅನೇಕ ಗುಂಪುಗಳಿದ್ದು, ಸಂಘದ ಪದಾಧಿಕಾರಿಗಳಲ್ಲಿ ಭಿನ್ನಾಭಿಪ್ರಾಯಗಳಿದ್ದು, ಸಂಸ್ಥೆಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 11 ಮತ್ತು 13 ನ್ನು ಉಲ್ಲಂಘಿಸಿದ್ದು 1995ರ ನಂತರ ಸಂಘದ ಲೆಕ್ಕಪತ್ರಗಳನ್ನು ಕಾರ್ಯಕಾರಿ ಸಮಿತಿ ಪಟ್ಟಿಯನ್ನು ಸಲ್ಲಿಸದೇ ಇದ್ದುದರಿಂದ ಸಂಸ್ಥೆಗೆ ನೋಟೀಸ್ ಜಾರಿ ಮಾಡಿ ಅದಕ್ಕೆ ಸಂಸ್ಥೆಯು ಯಾವುದೇ ಲಿಖಿತ ಹೇಳಿಕೆಯನ್ನು ನೀಡದೆ ಇರುವುದನ್ನು ಸರ್ಕಾರವು ಪರಿಶೀಲಿಸಿ ಸದರಿ ಸಂಘಕ್ಕೆ ಸಂಘದ ಹಿತದೃಷ್ಟಿಯಿಂದ ಹಾಗೂ ಸಾರ್ವಜನಿಕರ ಹಿತದೃಷ್ಟಿಯಿಂದ ಸದರಿ ಸಂಘಕ್ಕೆ ಉಪ ವಿಭಾಗಾಧಿಕಾರಿ, ಚಿತ್ರದುರ್ಗ ಇವರನ್ನು ಆಡಳಿತಾಧಿಕಾರಿಯನ್ನಾಗಿ ಮಾಡಲಾಯಿತು ತದನಂತರ ಕಾಲಕಾಲಕ್ಕೆ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ:07–01–2006 ರ ವರೆಗೆ ವಿಸ್ತರಿಸಿಕೊಂಡು ಬರಲಾಯಿತು. ಓದಲಾದ (2) ರಲ್ಲಿ ಆಡಳಿತಾಧಿಕಾರಿಗಳು ವರದಿ ಸಲ್ಲಿಸುತ್ತಾ ಸಂಸ್ಥೆಗೆ ಚುನಾವಣೆ ನಡೆಸಲು ಪ್ರಯತ್ನಿಸಲಾಗಿದ್ದು ಸಂಘದ ಸರ್ವಸದಸ್ಯರ ಪಟ್ಟಿಯೇ ಇಲ್ಲದಿರುವುದರಿಂದ ಸಂಘಕ್ಕೆ ಚುನಾವಣೆ ನಡೆಸಲು ಸಾಧ್ಯವಾಗುತ್ತಿಲ್ಲ. ಸಂಘ ನಡೆಸುತ್ತಿರುವ ವಿದ್ಯಾಸಂಸ್ಥೆಗಳು ಕಳೆದ 6 ವರ್ಷಗಳಿಂದ ಮುಚ್ಚಿದ್ದು, ಯಾವುದೇ ಕ್ರಮ ಜರುಗಿಸಲು ಸಾಧ್ಯವಾಗುತ್ತಿಲ್ಲವಾದ್ದರಿಂದ ಸದರಿ ಸಂಸ್ಥೆಯನ್ನು ವಿಸರ್ಜಿಸಲು ಕ್ರಮ ಜರುಗಿಸಬೇಕೆಂದು ಕೋರಿದ್ದಾರೆ. ಓದಲಾದ (3) ರ ಪತ್ರದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು ವರದಿ ಸಲ್ಲಿಸಿ ಸಂಸ್ಥೆಯು

1994 ರ ವರೆಗೆ ವಾರ್ಷಿಕ ಲೆಕ್ಕಪತ್ರ ಸಲ್ಲಿಸಿದ್ದು ತದನಂತರ ಯಾವ ದಾಖಲೆಯನ್ನು ಸಲ್ಲಿಸಿರುವುದಿಲ್ಲ. ಅಲ್ಲದೆ ಸಂಸ್ಥೆ ನಡೆಸುತ್ತಿರುವ ವಿದ್ಯಾ ಸಂಸ್ಥೆಗಳು ಮುಚ್ಚಿರುತ್ತವೆ. ಆಡಳಿತಾಧಿಕಾರಿಗಳು ಸಂಸ್ಥೆಯನ್ನು ವಿಸರ್ಜಿಸಲು ಕೋರಿರುತ್ತಾರೆ. ಅಲ್ಲದೆ ಸದರಿ ಸಂಘಕ್ಕೆ ಚುನಾವಣೆ ನಡೆಸಲು ಹಲವಾರು ಬಾರಿ ಪ್ರಯತ್ನಿಸಿ ಸಾಕಷ್ಟು ದೀರ್ಘಾವಧಿ ಕಾಲ ನೀಡಿದ್ದರೂ ಆಡಳಿತ ಮಂಡಳಿ ರಚಿಸಲು ಅಸಾಧ್ಯವಾದ ಕಾರಣ ಸಂಘವನ್ನು ವಿಸರ್ಜಿಸುವುದು ಉಚಿತವೆಂದು ಅಭಿಪ್ರಾಯ ನೀಡಿದ್ದಾರೆ. ಸರ್ಕಾರವು ಜಿಲ್ಲಾ ನೋಂದಣಾಧಿಕಾರಿ ಹಾಗೂ ಆಡಳಿತಾಧಿಕಾರಿಗಳ ವರದಿಗಳಲ್ಲಿಯ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸದರಿ ಸಂಘವನ್ನು ನೋಂದಣಿ ಕಾಯ್ದೆ ಪ್ರಕಾರ ವಿಸರ್ಜಿಸಲು ಸರ್ಕಾರವು ತೀರ್ಮಾನಿಸಿದ್ದು, ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 35 ಮುನೊಸೊ 2005, ಬೆಂಗಳೂರು, ದಿನಾಂಕ: 24ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 ರಂತೆ ಡಾ:ಬಿ.ಆರ್.ಅಂಬೇಡ್ಕರ್ ವಿದ್ಯಾ ಸಂಸ್ಥೆ (ರಿ), ಧರ್ಮಪುರ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇದರ ನೋಂದಣಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ಸದರಿ ಸಂಘವನ್ನು ವಿಸರ್ಜಿಸಲು (dissolve) ಜಿಲ್ಲಾ ನೋಂದಣಾಧಿಕಾರಿ ಚಿತ್ರದುರ್ಗ ಜಿಲ್ಲೆ ಇವರಿಗೆ ಅನುಮತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪಿ.ಆರ್. 699 ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಮದ್ದೂರು ಕ್ರೀಡಾ ಬಳಗ (ರಿ) ಮದ್ದೂರು-ಈ ಸಂಘದ ಕಾರ್ಯಕಾರಿ ಮಂಡಳಿಯ ಮೇಲಿರುವ ಆರೋಪಗಳು, ಅರ್ಹ ಮತ್ತು ಅನರ್ಹ ಸದಸ್ಯರನ್ನು ತೀರ್ಮಾನಿಸಲು ವಿಚಾರಣೆಯನ್ನು ಕಾಯ್ದಿರಿಸಲು ಸದರಿ ಸಂಘಕ್ಕೆ ಆಡಳಿತಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** ಜಿಲ್ಲಾ ನೋಂದಣಾಧಿಕಾರಿಗಳ ಪತ್ರ ಸಂಖ್ಯೆ:ಎಸ್‌ಒಆರ್/208/94-95/05-06, ದಿನಾಂಕ: 21-10-2005.

**ಪ್ರಸ್ತಾವನೆ:**

ಮೇಲೆ ಓದಲಾದ ಜಿಲ್ಲಾ ನೋಂದಣಾದಿಕಾರಿಗಳ ಪತ್ರದಲ್ಲಿ ಮದ್ದೂರು ಕ್ರೀಡಾ ಬಳಗ (ರಿ) ಮದ್ದೂರು ಈ ಸಂಸ್ಥೆ 2002-03/2003-04/2004-05ನೇ ಸಾಲಿನ ವಾರ್ಷಿಕ ಲೆಕ್ಕಪತ್ರ ಸಲ್ಲಿಸಿರುವುದಿಲ್ಲ. ಸಂಘದ ಬೈಲಾ ನಿಯಮದ ಪ್ರಕಾರ ಪ್ರತಿ ವರ್ಷ ಕಾರ್ಯಕಾರಿ ಮಂಡಳಿ ರಚನೆಯಾಗಬೇಕಾಗಿದ್ದು 2002-03 ರಲ್ಲಿ ರಚನೆಯಾದ ಕಾರ್ಯಕಾರಿ ಮಂಡಳಿಯೇ ಇಂದಿನವರೆಗೂ ಮುಂದುವರೆದಿರುತ್ತದೆ. ಸಂಘದ ಸದಸ್ಯರ ಪೈಕಿ ಅನೇಕರು ದೂರುಗಳನ್ನು ಸಲ್ಲಿಸಿದ್ದಾರೆ. ಈ ಕುರಿತು ವಿಚಾರಣೆ ನಡೆಸಲು ನೋಟೀಸ್ ಜಾರಿ ಮಾಡಿದ್ದಾಗ್ಯೂ ಸಂಘದಿಂದ ಯಾವುದೇ ವಹಿಯನ್ನು ಹಾಜರು ಪಡಿಸಿರುವುದಿಲ್ಲ. ಕಾರ್ಯಕಾರಿ ಮಂಡಳಿಯು ಸಲ್ಲಿಸಿರುವ ಸದಸ್ಯರ ಪಟ್ಟಿಯನ್ನು ಹಿಂದಿನ ಪಟ್ಟಿಯೊಂದಿಗೆ ತಾಳೆ ನೋಡಿದಾಗ ಅವುಗಳಲ್ಲಿ ಲೋಪದೋಷ ಮೇಲ್ನೋಟಕ್ಕೆ ಕಂಡುಬರುತ್ತದೆ. ಆದ್ದರಿಂದ ಅರ್ಹ ಸದಸ್ಯರ ಪಟ್ಟಿಯನ್ನು ಸೂಕ್ತ ವಿಚಾರಣೆ ನಡೆಸಿ ದಾಖಲೆಗಳನ್ನು ಪರಿಶೀಲಿಸಿ ಹೊಸ ಸದಸ್ಯರ ಸಭೆಯನ್ನು ನಡೆಸಿ ಹೊಸ ಕಾರ್ಯಕಾರಿ ಮಂಡಳಿಯನ್ನು ರಚನೆ ಮಾಡಿಕೊಡಲು ಅಲ್ಲದೆ ಸಂಸ್ಥೆಯ ಮೇಲಿರುವ ಆರೋಪಗಳು ಅರ್ಹ ಸದಸ್ಯರು ಯಾರು ಎಂಬುದನ್ನು ಕಂಡು ಹಿಡಿಯಲು ನೋಂದಣಿ ಕಾಯ್ದೆಯ 1960ರ ಕಲಂ 25 ರಡಿಯಲ್ಲಿ ನಡೆಸಲಾಗುವ ವಿಚಾರಣೆಯನ್ನು ಕಾಯ್ದಿಟ್ಟು ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಿಸಿ ಅವರಿಗೆ ಸಂಘದ ಎಲ್ಲಾ ದಾಖಲೆಗಳನ್ನು ವಹಿಸಿಕೊಟ್ಟು ವಿಚಾರಣೆಯ ತೀರ್ಮಾನದ ನಂತರ ಚುನಾವಣೆ ನಡೆಸಿ ಹೊಸ ಕಾರ್ಯಕಾರಿ ಮಂಡಳಿಗೆ ಅಧಿಕಾರ ವಹಿಸಿಕೊಡುವ ಕುರಿತು ಕ್ರಮ ಜರುಗಿಸಲು ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡುವಂತೆ ಕೋರಿರುತ್ತಾರೆ. ಜಿಲ್ಲಾ ನೋಂದಣಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಸರಕಾರವು ಸಂಸ್ಥೆಯನ್ನು ಸರಿದಾರಿಗೆ ತರುವ ದೃಷ್ಟಿಯಿಂದ ಆಡಳಿತಾಧಿಕಾರಿ ನೇಮಕ ಮಾಡಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 58 ಮುನೊಸೊ 2005, ಬೆಂಗಳೂರು ದಿನಾಂಕ: 24ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಾರ್ವಜನಿಕ ಹಿತದೃಷ್ಟಿಯಿಂದ ಮದ್ದೂರು ಕ್ರೀಡಾ ಬಳಗ (ರಿ), ಮದ್ದೂರು, ಮಂಡ್ಯ ಜಿಲ್ಲೆ ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 ಎ ಪ್ರಕಾರ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ತಹಶೀಲ್ದಾರ್ ಮದ್ದೂರು ತಾಲ್ಲೂಕು, ಮದ್ದೂರು ಇವರನ್ನು ಆಡಳಿತಾಧಿಕಾರಿಯನ್ನಾಗಿ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದೂ ಮೊದಲೊ ಅಲ್ಲಿಯವರೆಗೆ ನೇಮಿಸಿದೆ.

ಆಡಳಿತಾಧಿಕಾರಿಗಳು ಈ ಅವಧಿಯಲ್ಲಿ ಸಂಘದ ಅವ್ಯವಹಾರಗಳನ್ನು ಸರಿಪಡಿಸಿ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪಿ.ಆರ್. 700 ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

ವಿಷಯಃ ಬೆಂಗಳೂರು ವೈದ್ಯಕೀಯ ಕಾಲೇಜಿನ ಶಿಶುವೈದ್ಯಶಾಸ್ತ್ರ ಪ್ರಾಧ್ಯಾಪಕರಾದ ಡಾಃ ತಮಿಳುಸೆಲ್ವನ್‌ರವರನ್ನು ನಿಯೋನಟಾಲಜಿ ಫೆಲೋಶಿಪ್‌ಗೆ ನಿಯೋಜಿಸುವ ಬಗ್ಗೆ

ಓದಲಾಗಿದೆಃ ತಾಃ10-03-2006 ಸಂಖ್ಯೆಃ ವೈಶಿನಿಃಎಂಇಹೆಚ್ಃ80/05-06 ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ

ಪೀಠಿಕೆಃ

1. ಮೇಲೆ ಓದಲಾದ ದಿಃ 10-03-2006ರ ಪತ್ರದಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರು ಬೆಂಗಳೂರು ವೈದ್ಯಕೀಯ ಕಾಲೇಜಿನ ಶಿಶುವೈದ್ಯಶಾಸ್ತ್ರ ಉಪನ್ಯಾಸಕ ಡಾಃ ತಮಿಳ್ ಸೆಲ್ವನ್ ರವರನ್ನು ನಿಯೋನೆಟಾಲಜಿ ಫೆಲೋಶಿಪ್‌ಗೆ ನಿಯೋಜನೆ ಮಾಡುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

2. ಬೆಂಗಳೂರು ವೈದ್ಯಕೀಯ ಕಾಲೇಜಿನ ಶಿಶುವೈದ್ಯಶಾಸ್ತ್ರ ಉಪನ್ಯಾಸಕ ಡಾಃ ತಮಿಳ್ ಸೆಲ್ವನ್ ರವರು ದಿಃ 07-02-2001 ರಂದು ಸರ್ಕಾರಿ ಸೇವೆಗೆ ಸೇರಿದ್ದು, ದಿಃ 05-06-2003 ರಂದು ಅವರ ಖಾಯಂ ಪೂರ್ವಾ ಸೇವಾವಧಿಯನ್ನು ಘೋಷಿಸಲಾಗಿದೆ. ಅವರು ದಿಃ 06-02-2006 ಕ್ಕೆ 5 ವರ್ಷಗಳ ಸೇವಾವಧಿಯನ್ನು ಪೂರೈಸಿರುತ್ತಾರೆ. ಅವರು ಶಿಶುವೈದ್ಯಶಾಸ್ತ್ರ ಉಪನ್ಯಾಸಕರಾಗಿ ಕಾರ್ಯನಿರ್ವಹಿಸುತ್ತಿದ್ದು ಭಾರತೀಯ ವಿದ್ಯಾಪೀಠ ಡೀಮ್ಡ್ ವಿಶ್ವವಿದ್ಯಾನಿಲಯ ಪುಣೆಯಲ್ಲಿ ಒಂದು ವರ್ಷದ ಅವಧಿಗೆ ನಿಯೋನೇಟಾಲಜಿ ಫೆಲೋಶಿಪ್‌ಗೆ ಖಾಸಗಿಯಾಗಿ ಆಯ್ಕೆಯಾಗಿದ್ದು ನಿಯೋಜಿಸುವಂತೆ ಕೋರಿಕೊಂಡಿರುತ್ತಾರೆ. ಸದರಿ ಫೆಲೋಶಿಪ್‌ಗೆ ಸರ್ಕಾರದ ಪೂರ್ವಾನುಮತಿ ಇಲ್ಲದೆಯೇ ಆಯ್ಕೆಯಾಗಿರುತ್ತಾರೆ.

3. ಈ ಫೆಲೋಶಿಪ್‌ನ ಅವಧಿಯು 12 ತಿಂಗಳಾಗಿರುತ್ತದೆ. ದಿಃ 15-03-2006 ರಿಂದ 14-09-2006 ರವರೆಗೆ ಮಲಂಕರ ಆರ್ಥೊಡಾಗ್ಸ್ ಸಿರಿಯನ್ ಚರ್ಚ್ ಆಸ್ಪತ್ರೆ ಕೋಲೆಂಚರಿ, ಕೊಚ್ಚಿ ಇಲ್ಲಿ ನಡೆಯುತ್ತದೆ. ಅದೇ ರೀತಿ ದಿಃ 15-09-2006 ರಿಂದ 14-03-2007 ರವರೆಗೆ ಪುಣೆಯ ಭಾರತೀಯ ವಿದ್ಯಾಪೀಠ ಡೀಮ್ಡ್ ವಿಶ್ವವಿದ್ಯಾನಿಲಯದಲ್ಲಿ ನಡೆಯುತ್ತದೆ. ಇವರಿಗೆ ಒಂದು ವರ್ಷದ ಅವಧಿಗೆ ಅವರ ಹಕ್ಕಿನಲ್ಲಿರುವ ರಜೆ ಹಾಗೂ ಉಳಿದ ಅವಧಿಗೆ ಅಸಾಧಾರಣ ರಜೆ ಪಡೆಯುವ ಷರತ್ತಿಗೊಳಪಡಿಸಿದೆ . ಅದರಂತೆ ಈ ಆದೇಶ.

ಸರ್ಕಾರಿ ಆದೇಶ ಸಂಖ್ಯೆಃ ಆಕುಕ 26 ಎಂಎಂಸಿ 2005, ಬೆಂಗಳೂರು, ದಿನಾಂಕ ಃ 23ನೇ ಮಾರ್ಚ್ 2006

1. ಬೆಂಗಳೂರು ವೈದ್ಯಕೀಯ ಕಾಲೇಜಿನ ಶಿಶುವೈದ್ಯಶಾಸ್ತ್ರ ಉಪನ್ಯಾಸಕ ಡಾಃ ತಮಿಳುಸೆಲ್ವನ್, ಇವರು ಭಾರತೀಯ ವಿದ್ಯಾಪೀಠ ಡೀಮ್ಡ್ ಯೂನಿವರ್ಸಿಟಿ, ಮೆಡಿಕಲ್ ಕಾಲೇಜ್, ಪುಣೆಯಲ್ಲಿ ಕ್ಲಿನಿಕಲ್ ಫೆಲೋಶಿಪ್ ಪ್ರೋಗ್ರಾಂ ಇನ್ ನಿಯೋನೇಟಾಲಜಿ ಉನ್ನತ ಶಿಕ್ಷಣ ಪಡೆಯಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ಅಪೆಂಡಿಕ್ಸ್-II ಎ ನಿಯಮ 2 ರನ್ವಯ ದಿನಾಂಕಃ 15-03-2006 ರಿಂದ 14.03.2007 ರವರೆಗಿನ ಒಂದು ವರ್ಷದ ಅವಧಿಗೆ ಅವರ ಹಕ್ಕಿನಲ್ಲಿರುವ ರಜೆ ಹಾಗೂ ಉಳಿದ ಅವಧಿಗೆ ಅಸಾಧಾರಣ ರಜೆ (Extrordinary Leave) ಯೊಂದಿಗೆ ತೆರಳಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2. ಈ ಆದೇಶವನ್ನು ದಿಃ 21-03-2006 ಸಂಖ್ಯೆಃ ಆಇ 214 ಸೇ-4/06 ರಲ್ಲಿ ಆರ್ಥಿಕ ಇಲಾಖೆಯ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಡಿ.ಬಿ. ಗಣಾಚಾರಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

ಪಿ.ಆರ್. 703

**ವಿಷಯ:** ಬೆಂಗಳೂರು ವೈದ್ಯಕೀಯ ಕಾಲೇಜಿನ ಜೀವರಸಾಯನಶಾಸ್ತ್ರ ಉಪನ್ಯಾಸಕರಾದ ಡಾಃ ಎಸ್.ಎಂ. ರಾಜು ರವರ ಅನಧಿಕೃತ ಗೈರುಹಾಜರಿ ಬಗ್ಗೆ.

**ಓದಲಾಗಿದೆ:**
1) ತಾಃ 29.03.1995 ಸಂಖ್ಯೆಃ ವಶ್ರೇಅ(3)34:93-94ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ
2) ತಾಃ 20.03.2000 ಸಂಖ್ಯೆಃ ಆಕುಕ 17 ಎಂಸಿಎಲ್ 88 ರ ಸರ್ಕಾರಿ ಆದೇಶ
3) ತಾಃ 04.06.2004 ಸಂಖ್ಯೆಃ ವಶ್ರೇಅ(3)17:80-81ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ
4) ತಾಃ 05.08.2004 ಸಂಖ್ಯೆಃ ಡಿಜೆ(ಆರ್)ಇನಕ್ವೈರಿ:99:2000ರ ತನಿಖಾಧಿಕಾರಿಯವರ ವರದಿ
5) ತಾಃ 07.10.2004 ಸಂಖ್ಯೆಃ ಆಕುಕ 98 ಎಂಸಿಎಲ್ 2004ರ 2ನೇ ಕಾರಣ ಕೇಳುವ ನೋಟೀಸು

ಪೀಠಿಕೆಃ

ಬೆಂಗಳೂರು ವೈದ್ಯಕೀಯ ಕಾಲೇಜಿನ ಬಯೋಕೆಮಿಸ್ಟ್ರಿ ಉಪನ್ಯಾಸಕ ಡಾಃ ಎಸ್.ಎಂ. ರಾಜು ರವರು ತಾಃ 17.06.1987 ರಿಂದ ಕರ್ತವ್ಯದಿಂದ ಅನಧಿಕೃತ ಗೈರುಹಾಜರಾಗಿದ್ದರು. ಅವರ ಅನಧಿಕೃತ ಗೈರುಹಾಜರಿಯು ತೀವ್ರಸ್ವರೂಪದ ದುರ್ನಡತೆಯಾಗಿದ್ದ ಕಾರಣ ಅವರ ವಿರುದ್ಧ 1957 ರ ಕೆಸಿಎಸ್(ಸಿಸಿಎ) ನಿಯಮಾವಳಿಯ 11ನೇ ನಿಯಮದಡಿ ಇಲಾಖಾ ವಿಚಾರಣೆಯನ್ನು ನಡೆಸಲಾಗಿತ್ತು, ಅವರು ಇಲಾಖಾ ವಿಚಾರಣೆಯಲ್ಲಿ ಭಾಗವಹಿಸಿರಲಿಲ್ಲ. ಸಾಕಷ್ಟು ಅವಕಾಶಗಳನ್ನು ನೀಡಿದ ನಂತರ ಅವರ ಗೈರುಹಾಜರಿಯಲ್ಲಿ ಏಕಪಕ್ಷೀಯವಾಗಿ ಇಲಾಖಾ ವಿಚಾರಣೆಯನ್ನು ನಡೆಸಲಾಗಿತ್ತು, ವಿಚಾರಣಾ ವರದಿಯನ್ನು ನಿರ್ಧಿಷ್ಟ ಫೈಂಡಿಂಗ್ಸ್‌ನೊಂದಿಗೆ ವಿಚಾರಣಾ ಪ್ರಾಧಿಕಾರವು ಸರ್ಕಾರಕ್ಕೆ ಸಲ್ಲಿಸಿತ್ತು, ಈಗ ಹಾಲಿ ಜಾರಿಯಲ್ಲಿರುವ ಸ್ಥಾಯಿ ಆದೇಶದ ಪ್ರಕಾರ ದ್ವಿತೀಯ ಕಾರಣ ಸೂಚಿಸುವ ನೋಟೀಸ್‌ನ್ನು ಅಪಾದಿತರ ಮೇಲೆ ವಿಚಾರಣಾ ವರದಿಯೊಂದಿಗೆ ಜಾರಿ ಮಾಡಿ ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದು ಎಂಬುದರ ಮೇಲೆ ಅವರ ವಿವರಣೆ ಅಥವಾ ಹೇಳಿಕೆಯನ್ನು ಪಡೆಯಬೇಕಾಗಿತ್ತು, ಆದರೆ ರವಾನಿಸಿದ್ದ ಅಂತಹ ನೋಟೀಸ್‌ಗಳು ಆಪಾದಿತರ ಮೇಲೆ ಜಾರಿಯಾಗದೆ ಹಿಂತಿರುಗಿದ್ದವು. ಅದಕಾರಣ ಮೇಲ್ಕಂಡ ನಿಯಮಾವಳಿಯ 28-A ನೇ ನಿಯಮದಡಿ ಒಂದು ಸಂಕ್ಷಿಪ್ತ ಅಧಿಸೂಚನೆಯನ್ನು ಪತ್ರಿಕೆಗಳಲ್ಲಿ ಜಾಹಿರಾತು ನೀಡುವುದು ಅಗತ್ಯವಾಗಿತ್ತು, ಅದರಂತೆ ಅಪಾದಿತರನ್ನೊಳಗೊಂಡು ಇತರೆ 8 ಅಂತಹ ಆಪಾದಿತರ ಸಂಯುಕ್ತವಾದ ತಾಃ 15.03.2004 ಸಂಖ್ಯೆಃ ಆಕುಕ 7 ಎಂಸಿಎಲ್ 2004 ರ ಅಧಿಸೂಚನೆಯನ್ನು ತಾಃ 17.04.2004 ಪ್ರಜಾವಾಣಿ ಮತ್ತು ವಿಜಯಕರ್ನಾಟಕ ಪತ್ರಿಕೆಗಳಲ್ಲಿ ಪ್ರಕಟಿಸಿ 15 ದಿನಗಳಲ್ಲಿ ಅವರು ಸರ್ಕಾರವನ್ನು ಸಂಪರ್ಕಿಸಿ 2ನೇ ಕಾರಣ ಕೇಳುವ SCN ಅನ್ನು ಪಡೆದು ಉತ್ತರಗಳನ್ನು ಸಲ್ಲಿಸಲು ಅವಕಾಶ ಕಲ್ಪಿಸಲಾಗಿದೆಯೆಂದು ಸೂಚಿಸಲಾಗಿತ್ತು, ನಿರ್ಧಿಷ್ಟಪಡಿಸಿದ ಕಾಲಾವಧಿ ಅಂತ್ಯಗೊಂಡ ನಂತರ ಆಪಾದಿತರು ಈ ಸದಾವಕಾಶವನ್ನು ಉಪಯೋಗಿಸಿಕೊಂಡಿಲ್ಲ ಎಂದು ಪರಿಭಾವಿಸಿ ಅವರ ವಿರುದ್ಧ ಸಾಭೀತಾಗಿರುವ ತೀವ್ರತೆ ಮತ್ತು ಸ್ವರೂಪಕ್ಕೆ ತಕ್ಕಂತೆ ದಂಡನೆಯನ್ನು ಏಕಪಕ್ಷೀಯವಾಗಿ ವಿಧಿಸಲಾಗುವುದು ಎಂಬ ಎಚ್ಚರಿಕೆಯನ್ನು ಸಹಾ ನೀಡಲಾಗಿತ್ತು, 2 ತಿಂಗಳು ಗತಿಸಿದರೂ ಆಪಾದಿತರಿಂದ ಯಾವುದೇ ಪ್ರತಿಕ್ರಿಯೆ ಇಲ್ಲ. ಈಗಾಗಲೇ ಕಳೆದ 17 ವರ್ಷಗಳಿಗೂ ಮೀರಿ ಅವರು ಕರ್ತವ್ಯದಿಂದ ಅನಧಿಕೃತ ಗೈರುಹಾಜರಾಗಿದ್ದು ಅದು ಇಲಾಖಾ ವಿಚಾರಣೆಯಲ್ಲಿ ಸಾಭೀತಾಗಿರುವ ಹಿನ್ನೆಲೆಯಲ್ಲಿ ಮೇಲ್ಕಂಡ ನಿಯಮಾವಳಿಯ 8(iii)ನೇ ನಿಯಮದೊಂದಿಗೆ ಓದಲಾದ ತಾಃ 14.09.2001 ಸಂಖ್ಯೆಃ ಸಿಆಸುಇ 18 ಸೇಇವಿ 2001ರ ಸುತ್ತೋಲೆಯ ಪ್ರಕಾರ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಬಹುದಾಗಿದ್ದು, ಅದರಂತೆ ಈ ಕೆಳಕಂಡ ಆದೇಶ.

ಸರ್ಕಾರದ ಆದೇಶ ಸಂಖ್ಯೆ: ಆಕುಕ 98 ಎಂಸಿಎಲ್ 2005, ಬೆಂಗಳೂರು, ದಿನಾಂಕ 23ನೇ ಮಾರ್ಚ್ 2006

ಬೆಂಗಳೂರು ವೈದ್ಯಕೀಯ ಕಾಲೇಜಿನ ಜೀವರಸಾಯನಶಾಸ್ತ್ರ ಉಪನ್ಯಾಸಕರಾದ ಡಾ: ಎಸ್.ಎಂ. ರಾಜುರವರು 17 ವರ್ಷಗಳಿಗೂ ಮೀರಿ ಕರ್ತವ್ಯದಿಂದ ಅನಧಿಕೃತ ಗೈರುಹಾಜರಾಗಿದ್ದು, ಇಲಾಖಾ ವಿಚಾರಣೆಯಲ್ಲಿ ಸಾಭೀತಾಗಿರುವ ಹಿನ್ನೆಲೆಯಲ್ಲಿ 1957 ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಯ ನಿಯಮ ೮(viii)ನೇ ನಿಯಮದೊಂದಿಗೆ ಓದಲಾದ ದಿನಾಂಕ 14.09.2001 ಸಂಖ್ಯೆ: ಸಿಆಸುಇ 18 ಸೇಇವಿ 2001 ರ ಪ್ರಕಾರ ಸೇವೆಯಿಂದ ವಜಾ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಡಿ.ಬಿ. ಗಣಾಚಾರಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

ಪಿ.ಆರ್. 704

**HEALTH AND FAMILY WELFARE SECRETARIAT**

**Subject:** Controversy over the powers and functions of Director, RIO & Medical Superintendent, MINTO Ophthalmic Hospital, Bangalore – Resolving the issue – orders reg.

**Read:**
1) G.O.No. HMA 203 MMC 73, dated 05-03-1974.
2) G.O.No. HFW 235 CGS 80, dated 22-12-1981.
3) G.O.No. HFW 55 CGS 83, dated 23-07-1984.
4) G.O. No. HFW 135 MMC 99, dated 07-11-2001.
5) Notification No. HFW 16 MMC 2003, dated 25-11-2003.
6) Notification No. HFW 15 MMC 2003, dated 25-11-2003.
7) Proceedings of the meeting held on 07-10-2005 under the chairmanship of DME.
8) Letter No. DME/SUX/ARS/36/2005-06, dated 26-10-2005 from the Director of Medical Education.
9) Letter No. HFW 92 MMC 2005 (P), dated 14-12-2005.
10) KAT Application No. 391/2006 filed by Dr.K.S.Sriprakash on 05-01-2006.

**Preamble:**

1) In Government Order read at (1) above based on the recommendation of the MCI and Director of HFW, decentralization of powers to streamline the administration of the institute as well as the hospitals has been issued pending amendment to Karnataka Health and Family Planning Services (Collegiate Branch) C & R Rules.

2) In Government Order read at (2) above, Government have upgraded the Minto Institute of Ophthalmology, Bangalore into Regional Institute of Ophthalmology (RIO), Bangalore with Supporting staff. In Government Order read at (3) above, Government had equated the post of Director, so created for the RIO, Bangalore to that of Joint Director in the Department of Medical Education and HFW and empowered the Director to exercise the powers and exercise the functions on par with Joint Directors of HFW Department. In G.O. read at (4) above, the Duty Manual for the staff of the Medical Colleges and Hospitals has been issued.

3) Since there was some conflict between the Director, RIO and the Medical Superintendent, MINTO Ophthalmic Hospital regarding exercise of powers and also administrative matters, the Director of Medical Education referred the matter to Government for clarification. Accordingly the DME vide letter read at (8) above sought clarification of the Government indicating his opinion on each issues discussed in the meeting. Due to this conflict issues there was every possibility that this would affect the administration of the Hospital and Institute and also the public at large. Therefore, Government vide its letter read at (9) above issued instruction to DME to maintain status-quo. This communication has been challenged by Dr. K.S.Sriprakash in KAT Application read at (10) above. On 23-03-2006 when the matter posted for hearing before the KAT, the Hon'ble KAT ordered to resolve this issue before the next date of hearing.

4) In Government Order read at (1) above, as per decentralization of powers, five hospitals are attached to Bangalore Medical College and MINTO Ophthalmic Hospital is one among them. Each of these hospitals has a Medical Superintendent who will be the senior most Professor other than the Principal of the Bangalore Medical College in addition to his duties as Professor and HOD. Government of India, Ministry of Health suggested to convert the MINTO Institute of Ophthalmology into Regional Institute of Ophthalmology for smooth implementation of National Programme for Control of Blindness and Trachoma. Government of India has also provided monetary support; they have also permitted to create certain posts. In view of this the post of Director, RIO has been created for implementation of NPCB and

subsequently the post of Director, which was filled by posting of a senior-most Professor of Ophthalmology was upgraded to that of Joint Director and against this post Dr.Aruna has been promoted and posted from Bangalore Medical College. Subsequent to her relief from the Post of Professor of Ophthalmology from Bangalore Medical College Dr.K.S.Sriprakash has been posted in her place, who subsequently became the Medical Superintendent of MINTO Ophthalmic Hospital, Bangalore.

5) Accordingly, the Government has examined the entire issue in detail and order as follows.

**GOVERNMENT ORDER No. HFW 186 MSF 2004, BANGALORE, DATED: 24th April 2006**

In view of the above, Government are pleased to order as follows;

(1) Regional Institute of Ophthalmology and Minto Ophthalmic Hospital are separate entities. The Director, RIO is primarily created for blindness eradication programme in the rank of Joint Director. The Director RIO is a full-time non-practicing post and independent of the Minto Ophthalmic Hospital. The entire funding of this Institution along with the staff is done by the Government of India.

(2) The post of Medical Superintendent of Minto Hospital is like any other post of Medical Superintendent of Victoria, Vanivilas and Bowring and Lady Curzon Hospitals in the rank of Professor and HOD of Ophthalmology. It is a teaching as well as administrative post and attached to the Bangalore Medical College.

(3) The post of Director, Regional Institute of Ophthalmology and RIO are separate entities independent of the Minto Ophthalmic Hospital and cannot interfere with any functions, including administrative and financial affairs of Minto Ophthalmic Hospital.

By Order and in the name of the Governor of Karnataka,

**D.B. GANACHARI**

P.R. 705

Under Secretary to Government

Health and Family Welfare Department. (Medical Education)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಡಾ: ಎ.ಆರ್.ಮಂಜುನಾಥ್, ಸಾರ್ವಜನಿಕ ಸಂಪರ್ಕಾಧಿಕಾರಿ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಇವರ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳು.

**ಓದಲಾಗಿದೆ:** ಅಧಿಸೂಚನೆ ಸಂಖ್ಯೆ: ಸಿಆಸುಇ 79 ಸಅಸೇ 2006, ದಿನಾಂಕ: 15.3.2006.

**ಪ್ರಸ್ತಾವನೆ:**

ಮೇಲೆ ಓದಲಾದ ಅಧಿಸೂಚನೆಯಲ್ಲಿ ಡಾ: ಎ.ಆರ್.ಮಂಜುನಾಥ್, ಸಾರ್ವಜನಿಕ ಸಂಪರ್ಕಾಧಿಕಾರಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರನ್ನು ದಿನಾಂಕ: 17.2.2006 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ ನಿಯಮ 15(i) (iii) ರನ್ವಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಆಪ್ತ ಕಾರ್ಯದರ್ಶಿಯಾಗಿ ಗುತ್ತಿಗೆ ಆಧಾರದ ಮೇಲೆ ನೇಮಿಸಲಾಗಿದೆ. ಅಧಿಕಾರಿಯವರ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳನ್ನು ನಿಗದಿಪಡಿಸುವ ಅಗತ್ಯತೆಯನ್ನು ಮನಗಂಡು ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 79 ಸಅಸೇ 2006, ಬೆಂಗಳೂರು, ದಿನಾಂಕ: 26ನೇ ಏಪ್ರಿಲ್ 2006**

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಆಪ್ತ ಕಾರ್ಯದರ್ಶಿ ಹುದ್ದೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ ನಿಯಮ 15(i) (iii) ರನ್ವಯ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡಿರುವ ಡಾ: ಎ.ಆರ್.ಮಂಜುನಾಥ್ ರವರ ಗುತ್ತಿಗೆ ಆಧಾರದ ನೇಮಕಾತಿಯ ನಿಬಂಧನೆ ಹಾಗೂ ಷರತ್ತುಗಳನ್ನು ಈ ಆದೇಶದ ಅನುಬಂಧದಲ್ಲಿ ವಿವರಿಸಲಾಗಿದೆ.

ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ 7 ದಿನಗಳ ಒಳಗಾಗಿ 50.00 (ಐವತ್ತು) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

ಸದರಿ ಸರ್ಕಾರದ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 563 ವೆಚ್ಚ-5/2006, ದಿನಾಂಕ: 7.4.2006 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ(ಸೇವೆಗಳು-2).

**No.DPAR 79 SGO 2006, Dated: 26th April 2006**

**ANNEXURE**

Dr.A.R.Manjunath is appointed on contract basis on the following terms and conditions:-

1. **PERIOD:** The period of contract of Dr.A.R.Manjunath, Public Relation Officer, Kannada University, Hampi is for the period to be co-terminus with the office of the Minister for Primary and Secondary Education and Law, Justice, human rights and Parliamentary Affairs and

Legislation or so long as the service of Dr.A.R.Manjunath are required in the said office, whichever is earlier.

2. **COMMENCEMENT AND END OF CONTRACT:** The contract shall commence on the date on which the official takes charge of the post under the Government and ends on the date on which he hands over charge of the post under the Government.
3. **PAY & OTHER ALLOWANCES:** During the period of contract, Dr.A.R.Manjunath shall be entitled to pay including DA/HRA/CCA admissible to him in his Parent Organisation. He shall be entitled to special pay admissible to the post in the Minister establishment. However he shall not be entitled to any other deputation or foreign service allowance. He will also not be eligible for special allowances like lunch allowance / overtime allowance / bonus / Ex-gratia etc., attached to the post or attached to the parent organization.
4. **LEAVE RULES:** He will be governed by the Leave Rules applicable to him in his parent organisation.
5. **LEAVE SALARY CONTRIBUTION:** The Government shall pay Leave Salary contribution at the rate of 11% of salary.
6. **PENSION CONTRIBUTION:** Pension contribution shall be paid by the Government at the provisional rate of 12.5% of salary.
7. **MEDICAL CONCESSION:** The official shall be entitled to the medical attendance as per the Karnataka Government Servants (Medical Attendance) Rules 1963.
8. He shall perform the functions of Private Secretary to Minister and attend to all work entrusted to him from time to time by the said Minister.
9. He shall perform his duties diligently and he shall maintain strict secrecy in respect of official information which he comes to know in the course of his duties.
10. He shall be liable to reimburse to Government all the losses which the Government may sustain due to misconduct of any sort on his part.

**U.P. PRABHU**

P.R. 719 Under Secretary to Government, DPAR (Services-2).

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ಪುರಸಭಾ ನೌಕರರನ್ನು ಕರ್ನಾಟಕ ಮುನಿಸಿಪಾಲಿಟಿ ಅಧಿನಿಯಮ 1964ರ ಕಲಂ 365(2)(ಎ) ಪ್ರಕಾರ ಕರ್ನಾಟಕ ಪೌರಾಡಳಿತ ಸೇವಾ ಅಧಿಕಾರಿಗಳೆಂದು(ಕೆಎಂಎಸ್) ಆದೇಶಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ನಅಇ 258 ಇಎಂಸಿ 94, ದಿನಾಂಕ 9.12.98
2 ಸರ್ಕಾರಿ ಆದೇಶ ಸಂಖ್ಯೆ: ನಅಇ 34 ಇಎಂಸಿ 05, ದಿನಾಂಕ 29.7.2005
3 ಪೌರಾಡಳಿತ ನಿರ್ದೇಶನಾಲಯದ ಕಡತ ಸಂಖ್ಯೆ: ಪೌನಿ:ಕೆಎಂಎಸ್/ಸಿಆರ್-09/2005-06

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಸರ್ಕಾರಿ ಆದೇಶ ಸಂಖ್ಯೆ:ನಅಇ 258 ಇಎಂಸಿ 94, ದಿನಾಂಕ 9.12.98ರ ಕಾರ್ಯಕಾರಿ ಆದೇಶದ ಪ್ರಕಾರ ಈ ಕೆಳಕಂಡ ವೃಂದಗಳಲ್ಲಿ 5 ವರ್ಷ ಸೇವೆ ಸಲ್ಲಿಸಿದ ನೌಕರರನ್ನು ಶೇಕಡಾವಾರು ಸಂಖ್ಯೆಯಲ್ಲಿ ಕರ್ನಾಟಕ ಪೌರಾಡಳಿತ ಸೇವಾ ವೃಂದದ ಮುಖ್ಯಾಧಿಕಾರಿ ಶ್ರೇಣಿ-2ರ ಹುದ್ದೆಗೆ ಸೇರ್ಪಡೆ ಮಾಡಲು ಈ ಕೆಳಕಂಡಂತೆ ಅವಕಾಶವನ್ನು ಕಲ್ಪಿಸಲಾಗಿತ್ತು.

| | | | |
|---|---|---|---|
| 1 | ನೇರ ನೇಮಕಾತಿ ಮೂಲಕ | ಶೇಕಡಾ 33.33 | 33 ಹುದ್ದೆಗಳು |
| 2 | ಪೌರಸೇವಾ ವೃಂದದ ನೌಕರರಿಂದ ಆಯ್ಕೆ | | |
| | (ಅ) ಕಛೇರಿ ವ್ಯವಸ್ಥಾಪಕರು | ಶೇಕಡಾ 24.76 | 25 ಹುದ್ದೆಗಳು |
| | (ಆ) ಕಂದಾಯ ಅಧಿಕಾರಿಗಳು | ಶೇಕಡಾ 19.05 | 19 ಹುದ್ದೆಗಳು |
| | (ಇ) ಹಿರಿಯ ಆರೋಗ್ಯ ನಿರೀಕ್ಷಕರು | ಶೇಕಡಾ 22.85 | 23 ಹುದ್ದೆಗಳು |
| | | **ಒಟ್ಟು** | **100 ಹುದ್ದೆಗಳು** |

ಪೌರಾಡಳಿತ ನಿರ್ದೇಶಕರ ಶಿಫಾರಸ್ಸಿನಂತೆ ಹಿರಿಯ ಆರೋಗ್ಯ ನಿರೀಕ್ಷಕರು, ವ್ಯವಸ್ಥಾಪಕರು ಹಾಗೂ ಕಂದಾಯ ಅಧಿಕಾರಿಗಳಿಗೆ ಮುಂಬಡ್ತಿಗೆ ಬೇಕಾದ ಅನುಪಾತವನ್ನು ಸಮವಾಗಿರಬೇಕೆಂದು ಹಾಗೂ ಪೌರಾಡಳಿತ ನಿರ್ದೇಶನಾಲಯದ ನೌಕರರುಗಳಿಗೆ ಮುಂಬಡ್ತಿ ಅವಕಾಶ ಇಲ್ಲದಿರುವುದರಿಂದ ಅವರಿಗೂ ಸಹ ಕೆಎಂಎಸ್ ವೃಂದದಲ್ಲಿ ವಿಲೀನಗೊಳಿಸಿ ಒಟ್ಟಿಗೆ ಅವಕಾಶವನ್ನು ಕಲ್ಪಿಸಲು, ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿದ್ದ ಅನುಪಾತವನ್ನು ಈ ಕೆಳಕಂಡಂತೆ ಪರಿಷ್ಕರಿಸಿ ಮೇಲೆ ಓದಲಾದ (2)ರ ಆದೇಶದಲ್ಲಿ ಆದೇಶಿಸಲಾಗಿದೆ.

| | | |
|---|---|---|
| 1 | Direct Recruitment | 33-1/3 |
| 2 | By Absorption | 66.2/3 |
| | (a) Managers belonging to Municipal Service | 21.50% |
| | (b) Revenue Officers belonging to Municipal service | 21.50% |
| | (c) Sr. Heath Inspectors belonging to Municipal service | 21.50% |
| | (d) Managers in the office of DMA | 2.16% |

ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ಏಕ ಕಡತದಲ್ಲಿ ಪೌರಾಡಳಿತ ನಿರ್ದೇಶಕರು ಸರ್ಕಾರದ ದಿನಾಂಕ 29.7.2005 ರ ಆದೇಶದಲ್ಲಿ ಪೌರಾಡಳಿತ ನಿರ್ದೇಶನಾಲಯದ ವ್ಯವಸ್ಥಾಪಕರುಗಳಿಗೆ ಪೌರಾಡಳಿತ ಸೇವೆಯ ಮುಖ್ಯಾಧಿಕಾರಿ ಶ್ರೇಣಿ-2ರ ಹುದ್ದೆಗೆ ಶೇ.2.16% ವಿಲೀನಗೊಳಿಸಲು ಅವಕಾಶತೆ ಕಲ್ಪಿಸಿರುವುದರಿಂದ ಕೆಎಂಎಸ್ ಮುಖ್ಯಾಧಿಕಾರಿ ಶ್ರೇಣಿ-2ರ ಹಾಲಿ ವೃಂದ ಬಲದ ಆಧಾರದನ್ವಯ 2 ಹುದ್ದೆಗಳು ಖಾಲಿ ಇದ್ದು ಅದಕ್ಕೆ ಕಛೇರಿ ವ್ಯವಸ್ಥಾಪಕ ವೃಂದದಲ್ಲಿರುವ ಶ್ರೀ ಈರಾನಾಯಕ್ ಮತ್ತು ಶ್ರೀಮತಿ ಎಸ್. ರಾಜಮ್ಮ ಇವರುಗಳನ್ನು ಕೆಎಂಎಸ್ ವೃಂದಕ್ಕೆ ವಿಲೀನಗೊಳಿಸಿ ಸೇರ್ಪಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ವಿವರಿಸಿರುವ ಅಂಶಗಳನ್ನು ಗಮನಿಸಿದ ಸರ್ಕಾರವು ಪೌರಾಡಳಿತ ನಿರ್ದೇಶನಾಲಯ ರವರು ಶಿಫಾರಸ್ಸು ಮಾಡಿರುವಂತೆ ನಿಯಮಾನುಸಾರ ಅರ್ಹತೆ ಹೊಂದಿರುವ (1) ಶ್ರೀ.ಈರಾನಾಯಕ್ ಮತ್ತು (2) ಶ್ರೀಮತಿ ಎಸ್. ರಾಜಮ್ಮ ಇವರುಗಳನ್ನು ಕರ್ನಾಟಕ ಪೌರಾಡಳಿತ ಅಧಿನಿಯಮ 1964ರ ಕಲಂ 365(2)(ಎ) ಪ್ರಕಾರ ವೇತನ ಶ್ರೇಣಿ 4575-8400 ರಲ್ಲಿ ಕರ್ನಾಟಕ ಪೌರಾಡಳಿತ ಸೇವಾ ಅಧಿಕಾರಿಗಳ (ಮುಖ್ಯಾಧಿಕಾರಿ ಶ್ರೇಣಿ-2) ಹುದ್ದೆಗೆ ವಿಲೀನಗೊಳಿಸುವ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 03 ಇಎಂಸಿ 2006, ಬೆಂಗಳೂರು, ದಿನಾಂಕ: 18ನೇ ಏಪ್ರಿಲ್ 2006**

ಸರ್ಕಾರವು ಪ್ರಸ್ತಾವನೆಯಲ್ಲಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ಪೌರಾಡಳಿತ ಅಧಿನಿಯಮ 1964ರ ಕಲಂ 365(2)(ಎ) ಪ್ರಕಾರ ಪೌರಾಡಳಿತ ನಿರ್ದೇಶನಾಲಯದಲ್ಲಿ ಕಛೇರಿ ವ್ಯವಸ್ಥಾಪಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ (1) ಶ್ರೀ ಈರಾನಾಯಕ್ ಮತ್ತು (2) ಶ್ರೀಮತಿ ಎಸ್. ರಾಜಮ್ಮ ಇವರುಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ಪೌರ ಸೇವಾ ವೃಂದದ ಅಧಿಕಾರಿಗಳೆಂದು ವೇತನ ಶ್ರೇಣಿ-4575-8400ರ (ಮುಖ್ಯಾಧಿಕಾರಿ ಶ್ರೇಣಿ-2) ಹುದ್ದೆಯ ಸ್ಥಾನಮಾನವನ್ನು ನೀಡಿ, ವೇತನವನ್ನೊಳಗೊಂಡಂತೆ ಎಲ್ಲಾ ಸೇವಾ ಸೌಲಭ್ಯಗಳನ್ನು ಕೆ.ಎಂ.ಎ.ಎಸ್. ಅಧಿಕಾರಿ ಗಳಿಗೆ ಅನ್ವಯವಾಗುವ ಸೇವಾ ನಿಯಮಾವಳಿಗೊಳಪಟ್ಟು ಹಾಗೂ ಈ ಕೆಳಕಂಡ ನಿಬಂಧನೆ ಗೊಳಪಡಿಸಿ ವಿಲೀನಗೊಳಿಸಿ ಆದೇಶಿಸಲಾಗಿದೆ:

(1) ಶ್ರೀ ಈರಾನಾಯಕ್ ಹಾಗೂ ಶ್ರೀಮತಿ ಎಸ್. ರಾಜಮ್ಮ ಇವರುಗಳು ಸರ್ಕಾರದ ಆದೇಶ ಸಂಖ್ಯೆ: ನಅಇ 258 ಇಎಂಸಿ 94, ದಿನಾಂಕ 9.12.98 ರಲ್ಲಿ ತಿಳಿಸಿರುವಂತೆ ಮುಖ್ಯಾಧಿಕಾರಿ ಶ್ರೇಣಿ-2 ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳನ್ನು ಮುಖ್ಯಾಧಿಕಾರಿ ಶ್ರೇಣಿ-2 ಹುದ್ದೆಯಲ್ಲಿ ಕರ್ತವ್ಯ ವಹಿಸಿಕೊಂಡ ದಿನಾಂಕದಿಂದ ಎರಡು ವರ್ಷದೊಳಗಾಗಿ ಪಾಸು ಮಾಡತಕ್ಕದ್ದು.

(2) ಪ್ರಸ್ತುತ ಹೊರಡಿಸಿರುವ ವಿವಿಧ ವೃಂದಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಯಾವುದೇ ಮಾರ್ಪಾಡುಗಳನ್ನು ಮಾಡಲು ನ್ಯಾಯಾಲಯಗಳು ಆದೇಶಿಸಿದಲ್ಲಿ, ಆ ಪ್ರಕಾರ ಪೌರಾಡಳಿತ ನಿರ್ದೇಶಕರು 2 ತಿಂಗಳೊಳಗಾಗಿ ಈ ಬಗ್ಗೆ ಪರಿಷ್ಕೃತ ಅಂತಿಮ ಜೇಷ್ಠತಾ ಪಟ್ಟಿಯನ್ನು ಹೊರಡಿಸಿ ಸರ್ಕಾರಕ್ಕೆ ತಿಳಿಸತಕ್ಕದ್ದು.

ಸದರಿ ನೌಕರರನ್ನು ಕೆಎಂಎಸ್ ಮುಖ್ಯಾಧಿಕಾರಿ ಶ್ರೇಣಿ-2ರ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸುವ ವರೆಗೆ ಮತ್ತು ಮುಂದಿನ ಆದೇಶದ ವರೆಗೆ ಅವರು ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದುವರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 609

**ಬಿ.ಜಿ. ವಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಬೆಂಗಳೂರು ವೈದ್ಯಕೀಯ ಕಾಲೇಜಿನ ಶರೀರ ಕ್ರಿಯಾ ಶಾಸ್ತ್ರ ಉಪನ್ಯಾಸಕರಾದ ಡಾ:ಶತ್ರುಂಜಯನ್ ರವರನ್ನು ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸುವ ಬಗ್ಗೆ.

**ಓದಲಾಗಿದೆ:** 1) ದಿ:18-08-2005, ಸಂಖ್ಯೆ: ಆಕುಕ 91 ಎಂಎಂಸಿ 2005ರ ಸರ್ಕಾರಿ ಆದೇಶ.

2) ದಿ:27-12-2005 ಸಂಖ್ಯೆ:ವೈಶಿನಿ/ಎಂಇಹೆಚ್/61/05-06ರ ವೈದ್ಯಕೀಯ ಶಿಕ್ಷಣ ನಿರ್ದೇಶಕರವರ ಪತ್ರ.

3) ದಿ:11-10-2005ರ ಡಾ:ಶತ್ರುಂಜಯನ್‌ರವರ ಅರ್ಜಿ.

**ಪ್ರಸ್ತಾವನೆ:**

1) ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಬೆಂಗಳೂರು ವೈದ್ಯಕೀಯ ಕಾಲೇಜಿನ ಶರೀರ ಕ್ರಿಯಾ ಶಾಸ್ತ್ರ ಉಪನ್ಯಾಸಕರಾದ ಡಾ:ಶತ್ರುಂಜಯನ್‌ರವರಿಗೆ ಟಾಟಾ ಇನ್ಸಿಟಿಟ್ಯೂಟ್ ಆಫ್ ಸೋಷಿಯಲ್ ಸ್ಟಡೀಸ್‌ನಲ್ಲಿ ಮಾಸ್ಟರ್ ಆಫ್ ಹಾಸ್ಪಿಟಲ್ ಆಡ್ಮಿನಿಸ್ಟ್ರೇಷನ್ ಕೋರ್ಸ್‌ನ್ನು ವ್ಯಾಸಂಗ ಮಾಡಲು ಎರಡು ವರ್ಷಗಳ ಅವಧಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 8(14-ಎ)ರಡಿ "ಡೈಸ್‌ನಾನ್" ಮಂಜೂರು ಮಾಡಲಾಗಿದೆ.

2) ಮೇಲೆ (2)ರಲ್ಲಿ ಓದಲಾದ ವೈದ್ಯಕೀಯ ಶಿಕ್ಷಣ ನಿರ್ದೇಶಕರವರ ಪತ್ರದಲ್ಲಿ ಸದರಿ ವೈದ್ಯರು ಡೈಸ್ ನಾನ್ ಅವಧಿಯನ್ನು ನಿಯೋಜನೆ ಎಂದು ಪರಿಗಣಿಸಲು ಕೋರಿದ್ದು ಶರೀರಕ್ರಿಯಾ ಶಾಸ್ತ್ರ ವಿಷಯಕ್ಕೂ ವ್ಯಾಸಂಗ ಮಾಡುತ್ತಿರುವ ವಿಷಯಕ್ಕೂ ಸಂಬಂಧವಿಲ್ಲದಿರುವುದರಿಂದ ಅವರಿಗೆ ಯಾವುದೇ ಸೌಲಭ್ಯವನ್ನು ವಿಸ್ತರಿಸಲು ಅವಕಾಶವಿರುವುದಿಲ್ಲವೆಂದು ತಿಳಿಸಿರುತ್ತಾರೆ.

3) ಮೇಲೆ (3)ರಲ್ಲಿ ಓದಲಾದ ಡಾ:ಶತ್ರುಂಜಯನ್‌ರವರ ಅರ್ಜಿಯಲ್ಲಿ ಡೈಸ್‌ನಾನ್ ಅವಧಿಯನ್ನು ಉನ್ನತ ವ್ಯಾಸಂಗಕ್ಕಾಗಿ ನಿಯೋಜನಾ ಅವಧಿಯೆಂದು ಪರಿಗಣಿಸುವಂತೆ ಕೋರಿಕೊಂಡಿರುತ್ತಾರೆ. ಪ್ರಕರಣವನ್ನು ವಿವರವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 91 ಎಂಎಂಸಿ 2005, ಬೆಂಗಳೂರು, ದಿನಾಂಕ 2ನೇ ಮೇ 2006**

4) ದಿನಾಂಕ 18-08-2005 ಸಂಖ್ಯೆ: ಆಕುಕ 91 ಎಂಎಂಸಿ 2005ರ ಸರ್ಕಾರಿ ಆದೇಶವನ್ನು ಹಿಂಪಡೆದು, ಬೆಂಗಳೂರು ವೈದ್ಯಕೀಯ ಕಾಲೇಜಿನ ಶರೀರ ಕ್ರಿಯಾಶಾಸ್ತ್ರ ಉಪನ್ಯಾಸಕ ಡಾ:ಶತ್ರುಂಜಯನ್‌ರವರ ಸ್ನಾತಕೋತ್ತರ ವ್ಯಾಸಂಗದ

ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 61(1)(ಎ)ರ ಅನ್ವಯ ನಿಯೋಜನೆ ಎಂದು ಪರಿಗಣಿಸಲಾಗಿದೆ.

5) ಈ ಆದೇಶವನ್ನು ದಿನಾಂಕ 17-04-2006 ಸಂಖ್ಯೆ: ಆಇ 480 ವೆಚ್ಚ-5/2006ರ ಅ.ಟಿ.ಯಲ್ಲಿ ಆರ್ಥಿಕ ಇಲಾಖೆಯ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 730

**ಡಿ.ಬಿ. ಗಣಾಚಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

**ವಿಷಯ:** ಹಾಸನ ಸರ್ಕಾರಿ ನರ್ಸಿಂಗ್ ಕಾಲೇಜನ್ನು ಆರಂಭಿಸಲು ಸಂಯೋಜನೆ ಮತ್ತು ಮಂಜೂರಾತಿ ನೀಡುವ ಬಗ್ಗೆ.

**ಪ್ರಸ್ತಾವನೆ:**

1) ಹಾಸನದ ಚಾಮರಾಜೇಂದ್ರ ಆಸ್ಪತ್ರೆಯು 350 ಹಾಸಿಗೆಗಳ ಸೌಲಭ್ಯವನ್ನು ಹೊಂದಿದ್ದು, ವೈದ್ಯಕೀಯ ಕಾಲೇಜು ಸ್ಥಾಪನೆಯಾಗುತ್ತಿರುವ ಹಿನ್ನಲೆಯಲ್ಲಿ ಬೋಧಕ ಆಸ್ಪತ್ರೆಯಾಗಿ ಮೇಲ್ದರ್ಜೆಗೇರಿಸುವ ಹಿನ್ನಲೆಯಲ್ಲಿ ವಿದ್ಯಾರ್ಥಿಗಳ ಮತ್ತು ರೋಗಿಗಳ ಹಿತದೃಷ್ಟಿಯಿಂದ ಹಾಗೂ ಸಮರ್ಪಕ ವೈದ್ಯಕೀಯ ಸೇವೆ ನೀಡಲು ಹಾಸನದಲ್ಲಿ ಒಂದು ಸರ್ಕಾರಿ ನರ್ಸಿಂಗ್ ಕಾಲೇಜನ್ನು ಪ್ರಾರಂಭಿಸಲು ಸರ್ಕಾರವು ಉದ್ದೇಶಿಸಿದೆ.

2) ಮೇಲ್ಕಂಡ ಪ್ರಸ್ತಾವನೆಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 157 ಎಂಎಂಇ 2005, ಬೆಂಗಳೂರು, ದಿನಾಂಕ 29ನೇ ಏಪ್ರಿಲ್ 2006**

3) 1994ರ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಅಧಿನಿಯಮ 45ನೇ ಪ್ರಕರಣದ (5)ನೇ ಉಪ ಪ್ರಕರಣದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, 2006-07ನೇ ಸಾಲಿನಿಂದ ಚಾಮರಾಜೇಂದ್ರ ಆಸ್ಪತ್ರೆ, ಹಾಸನ ಇಲ್ಲಿ 100 ಸೀಟುಗಳ ಪ್ರವೇಶ ಮಿತಿಯೊಂದಿಗೆ ಬಿ.ಎಸ್.ಸಿ. ನರ್ಸಿಂಗ್ ಕೋರ್ಸನ್ನು ಪ್ರಾರಂಭಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಮಂಜೂರಾತಿ ನೀಡಲಾಗಿದೆ ಹಾಗೂ ಸಂಯೋಜನೆ ನೀಡಲು ಶಿಫಾರಸ್ಸು ಮಾಡಲಾಗಿದೆ.

(1) ಈ ಕಾಲೇಜುಗಳನ್ನು ಪ್ರಾರಂಭಿಸಲು ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಸಂಯೋಜನೆ ಪಡೆಯತಕ್ಕದ್ದು.

(2) ಭಾರತೀಯ ನರ್ಸಿಂಗ್ ಪರಿಷತ್ತಿನ ಅನುಮೋದನೆಯನ್ನು 1947ರ ಭಾರತೀಯ ನರ್ಸಿಂಗ್ ಪರಿಷತ್ತಿನ ಅಧಿನಿಯಮದ 13ನೇ ಪ್ರಕರಣದಡಿ ಪಡೆಯತಕ್ಕದ್ದು. ಭಾರತೀಯ ನರ್ಸಿಂಗ್ ಪರಿಷತ್ತು ನಿಗದಿಪಡಿಸಿರುವ ಪರಿನಿಯಮಾವಳಿಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು. ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಕರ್ನಾಟಕ ನರ್ಸಿಂಗ್ ಪರಿಷತ್ತು ಮತ್ತು ಭಾರತೀಯ ನರ್ಸಿಂಗ್ ಪರಿಷತ್ತು ನಿಗದಿಪಡಿಸಿರುವ ಮೂಲಭೂತ ಸೌಲಭ್ಯಗಳನ್ನು ಹೊಂದತಕ್ಕದ್ದು.

(3) ಭಾರತೀಯ ನರ್ಸಿಂಗ್ ಪರಿಷತ್ತಿನ ಅನುಮೋದನೆಯನ್ನು 1947ರ ಭಾರತೀಯ ನರ್ಸಿಂಗ್ ಕೌನ್ಸಿಲ್ ಅಧಿನಿಯಮದ 13ನೇ ಪ್ರಕರಣದಡಿ ಪಡೆದ ನಂತರವೇ ವಿದ್ಯಾರ್ಥಿಗಳ ಪ್ರವೇಶ ಮಾಡಿಕೊಳ್ಳತಕ್ಕದ್ದು.

(4) ಭಾರತೀಯ ನರ್ಸಿಂಗ್ ಪರಿಷತ್ತು ನಿಗದಿಪಡಿಸುವ ಪ್ರವೇಶ ಮಿತಿಯಂತೆ ವಿದ್ಯಾರ್ಥಿಗಳ ಪ್ರವೇಶ ಪಡೆಯತಕ್ಕದ್ದು.

(5) 1947ರ ಭಾರತೀಯ ನರ್ಸಿಂಗ್ ಪರಿಷತ್ತಿನ ಅಧಿನಿಯಮದ 13ನೇ ಪ್ರಕರಣದಡಿ ಮಾನ್ಯತೆಯನ್ನು ಪಡೆಯದೆ ಹಾಗೂ ಭಾರತೀಯ ನರ್ಸಿಂಗ್ ಪರಿಷತ್ತು ನಿರ್ದಿಷ್ಟಪಡಿಸುವ ವಿದ್ಯಾರ್ಥಿಗಳ ಪ್ರವೇಶ ಮಿತಿಯನ್ನು ಮೀರಿ ಯಾವುದೇ ಕಾರಣಕ್ಕೂ ವಿದ್ಯಾರ್ಥಿಗಳ ಪ್ರವೇಶವನ್ನು ಪಡೆಯತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಪಿ.ಆರ್. 731

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

**ವಿಷಯ:** ಹಾಸನ ಜಿಲ್ಲೆಯ ಹೊಳೇನರಸೀಪುರ, ಇಲ್ಲಿ ಸರ್ಕಾರಿ ನರ್ಸಿಂಗ್ ಕಾಲೇಜನ್ನು ಆರಂಭಿಸಲು ಸಂಯೋಜನೆ ಮತ್ತು ಮಂಜೂರಾತಿ ನೀಡುವ ಬಗ್ಗೆ.

**ಪ್ರಸ್ತಾವನೆ:**

1) ಹಾಸನಕ್ಕೆ ಹೊಂದಿಕೊಂಡಿರುವ ಹೊಳೇನರಸೀಪುರ ಸರ್ಕಾರಿ ಆಸ್ಪತ್ರೆಯು 100 ಹಾಸಿಗೆಗಳ ಸೌಲಭ್ಯವನ್ನು ಹೊಂದಿದ್ದು, ಸದರಿ ಆಸ್ಪತ್ರೆಯಲ್ಲಿ ನರ್ಸಿಂಗ್ ಕಾಲೇಜನ್ನು ಸ್ಥಾಪಿಸಿದಲ್ಲಿ ಸುತ್ತಮುತ್ತಲಿನ ರೋಗಿಗಳಿಗೆ ಹಾಗೂ ವಿದ್ಯಾರ್ಥಿಗಳಿಗೆ ಅನುಕೂಲವಾಗುವುದರಿಂದ ಹೊಳೆನರಸೀಪುರದ ಸರ್ಕಾರಿ ಆಸ್ಪತ್ರೆಯಲ್ಲಿ ಸರ್ಕಾರಿ ನರ್ಸಿಂಗ್ ಕಾಲೇಜನ್ನು ಪ್ರಾರಂಭಿಸಲು ಸರ್ಕಾರವು ಉದ್ದೇಶಿಸಿದೆ.

2) ಮೇಲ್ಕಂಡ ಪ್ರಸ್ತಾವನೆಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 157 ಎಂಎಂಇ 2005, ಬೆಂಗಳೂರು, ದಿನಾಂಕ 29ನೇ ಏಪ್ರಿಲ್ 2006**

3) 1994ರ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಅಧಿನಿಯಮ 45ನೇ ಪ್ರಕರಣದ (5)ನೇ ಉಪ ಪ್ರಕರಣದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, 2006-07ನೇ ಸಾಲಿನಿಂದ ಸರ್ಕಾರಿ ಆಸ್ಪತ್ರೆ, ಹೊಳೇನರಸೀಪುರ ಇಲ್ಲಿ 60 ಸೀಟುಗಳ ಪ್ರವೇಶ ಮಿತಿಯೊಂದಿಗೆ ಬಿ.ಎಸ್.ಸಿ. ನರ್ಸಿಂಗ್ ಕೋರ್ಸನ್ನು ಪ್ರಾರಂಭಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಮಂಜೂರಾತಿ ನೀಡಲಾಗಿದೆ ಹಾಗೂ ಸಂಯೋಜನೆ ನೀಡಲು ಶಿಫಾರಸ್ಸು ಮಾಡಲಾಗಿದೆ.

(1) ಈ ಕಾಲೇಜುಗಳನ್ನು ಪ್ರಾರಂಭಿಸಲು ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಸಂಯೋಜನೆ ಪಡೆಯತಕ್ಕದ್ದು.

(2) ಭಾರತೀಯ ನರ್ಸಿಂಗ್ ಪರಿಷತ್ತಿನ ಅನುಮೋದನೆಯನ್ನು 1947ರ ಭಾರತೀಯ ನರ್ಸಿಂಗ್ ಪರಿಷತ್ತಿನ ಅಧಿನಿಯಮದ 13ನೇ ಪ್ರಕರಣದಡಿ ಪಡೆಯತಕ್ಕದ್ದು. ಭಾರತೀಯ ನರ್ಸಿಂಗ್ ಪರಿಷತ್ತು ನಿಗದಿಪಡಿಸಿರುವ ಪರಿನಿಯಮಾವಳಿಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು. ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಕರ್ನಾಟಕ ನರ್ಸಿಂಗ್ ಪರಿಷತ್ತು ಮತ್ತು ಭಾರತೀಯ ನರ್ಸಿಂಗ್ ಪರಿಷತ್ತು ನಿಗದಿಪಡಿಸಿರುವ ಮೂಲಭೂತ ಸೌಲಭ್ಯಗಳನ್ನು ಹೊಂದತಕ್ಕದ್ದು.

(3) ಭಾರತೀಯ ನರ್ಸಿಂಗ್ ಪರಿಷತ್ತಿನ ಅನುಮೋದನೆಯನ್ನು 1947ರ ಭಾರತೀಯ ನರ್ಸಿಂಗ್ ಕೌನ್ಸಿಲ್ ಅಧಿನಿಯಮದ 13ನೇ ಪ್ರಕರಣದಡಿ ಪಡೆದ ನಂತರವೇ ವಿದ್ಯಾರ್ಥಿಗಳ ಪ್ರವೇಶ ಮಾಡಿಕೊಳ್ಳತಕ್ಕದ್ದು.

(4) ಭಾರತೀಯ ನರ್ಸಿಂಗ್ ಪರಿಷತ್ತು ನಿಗದಿಪಡಿಸುವ ಪ್ರವೇಶ ಮಿತಿಯಂತೆ ವಿದ್ಯಾರ್ಥಿಗಳ ಪ್ರವೇಶ ಪಡೆಯತಕ್ಕದ್ದು.

(5) 1947ರ ಭಾರತೀಯ ನರ್ಸಿಂಗ್ ಪರಿಷತ್ತಿನ ಅಧಿನಿಯಮದ 13ನೇ ಪ್ರಕರಣದಡಿ ಮಾನ್ಯತೆಯನ್ನು ಪಡೆಯದೆ ಹಾಗೂ ಭಾರತೀಯ ನರ್ಸಿಂಗ್ ಪರಿಷತ್ತು ನಿರ್ದಿಷ್ಟಪಡಿಸುವ ವಿದ್ಯಾರ್ಥಿಗಳ ಪ್ರವೇಶ ಮಿತಿಯನ್ನು ಮೀರಿ ಯಾವುದೇ ಕಾರಣಕ್ಕೂ ವಿದ್ಯಾರ್ಥಿಗಳ ಪ್ರವೇಶವನ್ನು ಪಡೆಯತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

ಪಿ.ಆರ್. 732

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಕನಕಪುರ ತಾಲ್ಲೂಕಿನ ಅರಣ್ಯ ಪ್ರದೇಶದಲ್ಲಿ ಗ್ರಾನೈಟ್ ಬ್ಲಾಕ್‌ಗಳ ಅಕ್ರಮ ಗಣಿಗಾರಿಕೆಯ ತನಿಖೆ ನಡೆಸುವ ಬಗ್ಗೆ.

**ಓದಲಾಗಿದೆ:** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿರವರ ಪತ್ರ ಸಂಖ್ಯೆ: A5(1)GFL. Misc-1/06-07, ದಿನಾಂಕ: 17-4-06.

**ಪ್ರಸ್ತಾವನೆ:**

ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು ಕನಕಪುರ ತಾಲ್ಲೂಕು ಕುನೂರು ಮತ್ತು ಹೆಬ್ಬಾಳ ಗ್ರಾಮದಲ್ಲಿನ ಎರಡು ಗ್ರಾನೈಟ್ ಕಲ್ಲುಗಣಿಗಾರಿಕೆ ಪ್ರದೇಶವನ್ನು ದಿನಾಂಕಃ 14-4-2006 ರಂದು ಸ್ಥಳ ಪರಿಶೀಲನೆ ನಡೆಸಿದರು. ಈ ಸಂದರ್ಭದಲ್ಲಿ ಗ್ರಾನೈಟ್ ಕಲ್ಲುಗಣಿಗಾರಿಕೆ ನಡೆಸುತ್ತಿರುವ ಮೆ: ಶಿಲ್ಪ ಗ್ರಾನೈಟ್ ಎಕ್ಸ್‌ಪೋರ್ಟ್ ಮತ್ತು ಮೆ: ಸೋನಿ ಗ್ರಾನೈಟ್ಸ್‌ಗಳನ್ನು ಸಹ ಪರಿಶೀಲಿಸಲಾಯಿತು. ಗಣಿಗಾರಿಕೆ ನಡೆಸುತ್ತಿದ್ದ ಪ್ರದೇಶವನ್ನು ಸೂಕ್ಷ್ಮವಾಗಿ ಪರಿಶೀಲಿಸಲಾಗಿ ಸದರಿ ಗುತ್ತಿಗೆದಾರರು ಅರ್ಕಾವತಿ ಕಿರು ಅರಣ್ಯದ ಒಳಗೆ ಗಣಿಗಾರಿಕೆಯನ್ನು ನಡೆಸುತ್ತಿರುವುದು ಕಂಡು ಬಂದಿರುತ್ತದೆ. ಈ ಕಲ್ಲು ಗಣಿಗಾರಿಕೆಗಳು ನಡೆಸುತ್ತಿರುವ ಪ್ರದೇಶದ ಸರ್ವೆ ನಂಬರುಗಳು ಭಾಗಶಃ ರಾಜ್ಯ ಅರಣ್ಯದಲ್ಲಿ ಮತ್ತು ಭಾಗಶಃ ರಾಜ್ಯ ಅರಣ್ಯದ ಹೊರಗೆ ಇರುವುದು. ಆದರೆ ಈ ಎರಡು ಪ್ರದೇಶವನ್ನು ಪ್ರತ್ಯೇಕಿಸಲು ಯಾವುದೇ ಗಡಿಯನ್ನು ಗುರುತು ಮಾಡಿರುವುದಿಲ್ಲ. ಇಂತಹವುದೇ ಅನೇಕ ಕಲ್ಲುಗಣಿಗಾರಿಕೆಗಳು ಕನಕಪುರ, ಸಾತನೂರು ಮತ್ತು ಕನಕಪುರ ವನ್ಯಜೀವಿ ಅರಣ್ಯ ವಲಯಗಳಲ್ಲಿ ಇರಬಹುದೆಂದು ತಿಳಿದುಬಂದಿದ್ದು ಈ ದಿಕ್ಕಿನಲ್ಲಿ ವಿಚಾರಿಸಿದಾಗ ಈ ರೀತಿಯ ಅಕ್ರಮ ಗಣಿಗಾರಿಕೆಯು ಈ ಪ್ರದೇಶಗಳಲ್ಲಿ ನಡೆಯುತ್ತಿದೆ ಎಂದು ಹಾಗೂ ಇದಕ್ಕೆ ಅರಣ್ಯ(ಸಂರಕ್ಷಣಾ) ಕಾಯಿದೆ 1980 ರ ಅನುಮತಿಯನ್ನು ಸಹ ಪಡೆದಿರುವುದಿಲ್ಲವೆಂದು ಕಂಡುಬಂದಿದೆ. ಇಂತಹ ಅನಿರ್ಬಂಧಿತ ಕಲ್ಲುಗಣಿಗಾರಿಕೆಯಿಂದಾಗಿ ರಾಜ್ಯಕ್ಕೆ ಅಪಾರ ನಷ್ಟ ಉಂಟಾಗುವುದರಿಂದ ಇವುಗಳನ್ನು ಗುರುತಿಸಿ ಈ ಪ್ರಕರಣದಲ್ಲಿ ತನಿಖೆ ನಡೆಸುವ ಅಗತ್ಯವಿದೆ.

ಈ ಕಾರಣದಿಂದಾಗಿ ಕನಕಪುರ ತಾಲ್ಲೂಕಿನ ವಿವಿಧ ವಲಯಗಳಲ್ಲಿ ನಡೆಯುತ್ತಿರುವ ಅಕ್ರಮ ಗಣಿಗಾರಿಕೆಯನ್ನು ಕಂಡು ಹಿಡಿದು, ವಿವರವಾದ ತನಿಖೆಯನ್ನು ನಡೆಸಲು ಉದ್ದೇಶಿಸಿದೆ. ಈ ತನಿಖೆಯನ್ನು ಅರಣ್ಯ ಇಲಾಖೆಯ ಅಧಿಕಾರಿಗಳ ತಂಡದಿಂದ, ಕಂದಾಯ ಹಾಗೂ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಸಹಕಾರದೊಂದಿಗೆ ನಡೆಸಲು ಉದ್ದೇಶಿಸಿದೆ. ಈ ತನಿಖೆಯನ್ನು ಅದಷ್ಟು ತ್ವರಿತವಾಗಿ ಸಂಪೂರ್ಣಗೊಳಿಸಬೇಕಾಗಿದೆಯಾದ್ದರಿಂದ ಕೆಳಕಂಡ ಅಧಿಕಾರಿಗಳನ್ನು ನೇಮಿಸುವುದರ ಮೂಲಕ ಭೂಮಾಪನ ಮತ್ತು ತನಿಖೆಯನ್ನು ನಡೆಸುವುದು ಸೂಕ್ತವೆಂದು ಭಾವಿಸಿದೆ. ಡಾ: ಯು.ವಿ.ಸಿಂಗ್, ನಿರ್ದೇಶಕರು(ಯೋಜನೆಗಳು), ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿರವರು ಈ ತಂಡದ ಮುಖ್ಯಸ್ಥರಾಗಿದ್ದು, ಈ ಕೆಳಗಿನ ಅಧಿಕಾರಿಗಳ ತಂಡವು ತನಿಖೆಯನ್ನು ನಡೆಸಲು ಇವರಿಗೆ ಸಹಕಾರ ನೀಡುವುದು.

1. ಶ್ರೀ ನಾಗರಾಜ ಹಂಪೋಳ್, ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ವೃತ್ತ, ಬೆಂಗಳೂರು.
2. ಶ್ರೀ ಅಜಯ ಮಿಶ್ರ, ಅರಣ್ಯ ಸಂರಕ್ಷಣಾಧಿಕಾರಿ, ಕಾರ್ಯಯೋಜನೆ, ಬೆಳಗಾಂ.
3. ಶ್ರೀ ಬಿ.ಪಿ. ರವಿ, ಉಪ ಅರಣ್ಯ ಸಂರಕ್ಷಣಾಧಿಕಾರಿ, ಕೊಪ್ಪ ವಿಭಾಗ.
4. ಶ್ರೀ ಶಾಂತಕುಮಾರ್, ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು.
5. ಶ್ರೀ ಯು.ವಿ.ಸಿಂಗ್‌ರವರಿಂದ ಆಯ್ಕೆಯಾದ ತರಬೇತಿ ಪಡೆದ 15 ಜನ ಸರ್ವೆಯರ್ ಮತ್ತು 6 ಜನ ವಲಯ ಅರಣ್ಯಾಧಿಕಾರಿಗಳು.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ರವರು ಉಲ್ಲೇಖದಲ್ಲಿ ಸೂಚಿಸಿರುವ ಆದೇಶದಲ್ಲಿ ಈ ರೀತಿ ತನಿಖೆ ನಡೆಸಲು ಅಧಿಕಾರಿಗಳನ್ನು ನೇಮಿಸಿರುತ್ತಾರೆ. ಆದರಂತೆ ಸರ್ಕಾರದಿಂದಲು ಸಹ ಆದೇಶವನ್ನು ಹೊರಡಿಸಲು ಉದ್ದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 45 ಎಫ್‌ಎಫ್‌ಎಂ 2006, ಬೆಂಗಳೂರು, ದಿನಾಂಕಃ 27ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ರಾಜ್ಯದ ಅರಣ್ಯ ಪ್ರದೇಶಗಳಲ್ಲಿ (ಸರ್ವೋಚ್ಚ ನ್ಯಾಯಾಲಯವು ರಿ.ಅ. ಸಂ: 202:1995 ರ ಮೇಲೆ ದಿನಾಂಕಃ 12-12-1996 ರಲ್ಲಿ ಅಧಿಸೂಚಿತ ಅರಣ್ಯ ಮತ್ತು

ಅರಣ್ಯವೆಂದು ಭಾವಿಸಲ್ಪಡುವ ಪ್ರದೇಶ (ಡೀಮ್ಡ್ ಫಾರೆಸ್ಟ್) ಬಗ್ಗೆ ನೀಡಿರುವ ವಿಶ್ಲೇಷಣೆ ಅನ್ವಯ) ಗ್ರಾನೈಟ್ ಬ್ಲಾಕ್‌ಗಳ ಕಲ್ಲುಗಣಿಗಾರಿಕೆ ನಡೆಯುತ್ತಿರುವ ಬಗ್ಗೆ ಪೂರ್ಣ ತನಿಖೆ ನಡೆಸಿ ಒಂದು ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲು ಡಾ: ಯು.ವಿ. ಸಿಂಗ್, ನಿರ್ದೇಶಕರು(ಯೋಜನೆಗಳು), ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ರವರ ನೇತೃತ್ವದಲ್ಲಿ ಒಂದು ತಂಡವನ್ನು ರಚಿಸಲು ಸರ್ಕಾರ ಆದೇಶಿಸಿದೆ.

ಈ ಉದ್ದೇಶಕ್ಕಾಗಿ ಇವರು ಸರ್ವೆ ಮತ್ತು ಸಂಬಂಧಪಟ್ಟ ಕೆಲಸಗಳಿಗಾಗಿ ಅವಶ್ಯವಿರುವ ಸಿಬ್ಬಂದಿಯನ್ನು ಅರಣ್ಯ ಇಲಾಖೆಯಿಂದ ನೇಮಿಸಿಕೊಳ್ಳಲು ಸಹ ಆದೇಶಿಸಿದೆ. ಡಾ: ಯು.ವಿ. ಸಿಂಗ್‌ರವರಿಗೆ ಸರ್ವೆ ಮತ್ತು ತನಿಖೆಗಾಗಿ ಸಹಕಾರ ನೀಡಲು ಕೆಳಕಂಡ ಅಧಿಕಾರಿಗಳನ್ನು ನೇಮಿಸಲಾಗಿದೆ.

1. ಶ್ರೀ ನಾಗರಾಜ ಹಂಪ್ರೋಳ್, ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ವೃತ್ತ, ಬೆಂಗಳುಾರು.
2. ಶ್ರೀ ಅಜಯ ಮಿಶ್ರ, ಅರಣ್ಯ ಸಂರಕ್ಷಣಾಧಿಕಾರಿ, ಕಾರ್ಯಯೋಜನೆ, ಬೆಳಗಾಂ.
3. ಶ್ರೀ ಬಿ.ಪಿ. ರವಿ, ಉಪ ಅರಣ್ಯ ಸಂರಕ್ಷಣಾಧಿಕಾರಿ, ಕೊಪ್ಪ ವಿಭಾಗ.ಕೊಪ್ಪ.
4. ಶ್ರೀ ಶಾಂತಕುಮಾರ್, ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ.
5. ಶ್ರೀ ಯು.ವಿ.ಸಿಂಗ್‌ರವರಿಂದ ಆಯ್ಕೆಯಾದ ತರಬೇತಿ ಪಡೆದ 15 ಜನ ಸರ್ವೆಯರ್ ಮತ್ತು 6 ಜನ ವಲಯ ಅರಣ್ಯಾಧಿಕಾರಿಗಳು.

**ಈ ತಂಡವು ಕಾರ್ಯನಿರ್ವಹಿಸಲು ಕೆಳಕಂಡ ಸೌಲಭ್ಯಗಳನ್ನು ನೀಡಲಾಗಿದೆ.**

ಅ) ತಂಡದ ಮುಖ್ಯಸ್ಥರ ಕೋರಿಕೆಯನ್ವಯ 6 ಜೀಪುಗಳನ್ನು ಅರಣ್ಯ ಇಲಾಖೆ ಒದಗಿಸುವುದು.

ಆ) ಸರ್ವೆ ಕಾರ್ಯ ಮತ್ತು ಇತರ ಸಂಭವನೀಯ ವೆಚ್ಚಗಳನ್ನು ತಂಡದ ಮುಖ್ಯಸ್ಥರ ನಿರ್ದೇಶನದ ಮೇರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರು ಭರಿಸುವುದು.

ಇ) ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ರವರು ಅವಶ್ಯವಿರುವ ಮಾಹಿತಿ ಮತ್ತು ಸಾಮಾಗ್ರಿ ಮತ್ತು ಸಿಬ್ಬಂದಿಯನ್ನು ನೀಡುವರು.

ಈ) ಅರಣ್ಯ ಪ್ರದೇಶಕ್ಕೆ ಸಂಬಂಧಿಸಿದ ದಸ್ತಾವೇಜುಗಳನ್ನು ಸಹ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ರವರು ನೀಡುವರು.

ಉ) ಸರಿಯಾಗಿ ಗಡಿ ಸರ್ವೆಯನ್ನು ನಡೆಸಲು ಮತ್ತು ವಿವಾದವನ್ನು ತಡೆಗಟ್ಟಲು ಅವಶ್ಯವಿರುವ ಸರ್ವೆಯರ್‌ಗಳನ್ನು ಜಿಲ್ಲಾಧಿಕಾರಿ, ಬೆಂಗಳೂರು ರವರು ಒದಗಿಸುವರು.

ಋ) ಕನಕಪುರ ತಾಲ್ಲೂಕಿನಲ್ಲಿ ಗಣಿ ಗುತ್ತಿಗೆಗೆ ನೀಡಿರುವ ವಿವರಗಳನ್ನು ಹಾಗೂ ಅವಶ್ಯವಿರುವ ಪಟ್ಟಿಯನ್ನು ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಆಯುಕ್ತರಿಂದ ತಂಡದ ಮುಖ್ಯಸ್ಥರು ಪಡೆದುಕೊಳ್ಳತಕ್ಕದ್ದು.

ಮೇಲೆ ಸೂಚಿಸಿರುವ ತಂಡವು ಕನಕಪುರ ತಾಲ್ಲೂಕಿನ ಅಧಿಸೂಚಿತ ಅರಣ್ಯ ಮತ್ತು ಅರಣ್ಯವೆಂದು ಭಾವಿಸಲ್ಪಡುವ ಪ್ರದೇಶ (ಡೀಮ್ಡ್ ಫಾರೆಸ್ಟ್) ಗಳಲ್ಲಿ ನಡೆಯುತ್ತಿರುವ ಕಲ್ಲು ಗಣಿಗಾರಿಕೆಯ ಬಗ್ಗೆ ಸರ್ವೆ ನಡೆಸಿ ತಮ್ಮ ಒಂದು ವಿವರವಾದ ವರದಿಯನ್ನು ಸರ್ಕಾರಕ್ಕೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿರವರ ಮುಖಾಂತರ 5ನೇ ಮೇ, 2006 ರೊಳಗೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ವತ್ಸಲ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿ.ಆರ್. 720

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಶ್ರೀ ಹೆಚ್. ಜನಾರ್ದನ, ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಬೀದರ್ ಇವರ ವಿರುದ್ಧ ಟ್ರಾಪ್ ಪ್ರಕರಣ - ವಿಚಾರಣೆ ಬಾಕಿ ಇಟ್ಟು ಅಮಾನತ್ತನ್ನು ತೆರವುಗೊಳಿಸುವ ಬಗ್ಗೆ-ಆದೇಶ.

**ಓದಲಾಗಿದೆ:**
1. ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಲ್ ಓಕೆ/ಐಎನ್ ವಿ(ಜಿ)/ಜಿಎಲ್ ಬಿ-11/ಸಿಆರ್-1/2005/ಬೀದರ್, ದಿನಾಂಕ 28/10/2005.
2. ಸರ್ಕಾರಿ ಆದೇಶ ಸಂಖ್ಯೆ. ಗ್ರಾಅಪ 30 ಇಎನ್‌ಕ್ಯೂ 05, ದಿ. 22-11-2005.

**ಪ್ರಸ್ತಾವನೆ:**

ಶ್ರೀ ಹೆಚ್. ಜನಾರ್ದನ, ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಬೀದರ್, ಇವರು ದಿನಾಂಕ: 5/10/2005 ರಂದು ಗುತ್ತಿಗೆದಾರರಾದ ಶ್ರೀ ನೀಲಕಂಠ, ಠಾಣಕುಶನೂರು ವಾಸಿ, ಔರಾದ್ ತಾಲ್ಲೂಕು, ಬೀದರ್ ಜಿಲ್ಲೆ ಇವರು ಮಾಡಿಸಿದ ಕಾಮಗಾರಿ ಬಾಬ್ತು ರೂ.5,87,153-00ಗಳ ಬಾಕಿ ಬಿಲ್‌ನ್ನು ಪಾಸ್ ಮಾಡಿ ಅವರಿಗೆ ಚೆಕ್ ನೀಡಲು ರೂ.10,000-00 ಗಳ ಅಕ್ರಮ ಸಂಭಾವನೆಯನ್ನು ಒತ್ತಾಯಿಸಿ ಪಡೆಯುತ್ತಿದ್ದ ಸಮಯದಲ್ಲಿ ಬೀದರ್ ಲೋಕಾಯುಕ್ತದ ಪೊಲೀಸ್ ಅಧಿಕಾರಿಗಳು ಬೀಸಿದ ಬಲೆಗೆ ಸಿಕ್ಕಹಾಕಿಕೊಂಡಿರುತ್ತಾರೆಂದೂ, ಸದರಿ ಅಧಿಕಾರಿಯನ್ನು ಅಂದೇ ದಸ್ತಗಿರಿ ಮಾಡಿ ಜಾಮೀನಿನ ಮೇಲೆ ಬಿಡುಗಡೆ ಮಾಡಲಾಗಿದೆ ಎಂದೂ, ಇವರ ಮೇಲಿನ ಭ್ರಷ್ಟಾಚಾರದ ಅಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ ಎಂದೂ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 28/10/2005ರ ಪತ್ರದಲ್ಲಿ ಲೋಕಾಯುಕ್ತದ ಅಪರ ಪೊಲೀಸ್ ಮಹಾ ನಿರ್ದೇಶಕರು ವರದಿ ಮಾಡಿದ್ದರು ಹಾಗೂ ಶ್ರೀ ಹೆಚ್. ಜನಾರ್ದನ, ಇವರು ಮೇಲಿನಂತೆ ಅಕ್ರಮ ಸಂಭಾವನೆ ಸ್ವೀಕರಿಸುವ ಮೂಲಕ ಭ್ರಷ್ಟಾಚಾರ ನಿರೋದ ಕಾಯ್ದೆ 1988ರ ಕಲಂ-7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ-13(2)ರಲ್ಲಿನ ಶಿಕ್ಷಾರ್ಹ ಅಪರಾದವೆಸಗಿದ್ದು, ಅದಕ್ಕಾಗಿ ಇವರ ಮೇಲೆ ಬೀದರ್ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 1/2005ನ್ನು ದಾಖಲಿಸಲಾಗಿದೆ ಎಂದು ವರದಿ ಮಾಡಿದ್ದರು.

ಲೋಕಾಯುಕ್ತದ ಅಪರ ಪೊಲೀಸ್ ಮಹಾ ನಿರ್ದೇಶಕರು ಮೇಲೆ ಹೇಳಿರುವ ತಮ್ಮ ಪತ್ರದಲ್ಲಿ ಮಾಡಿರುವ ವರದಿಯನ್ನು ಪರಿಶೀಲಿಸಿ, ಶ್ರೀ ಹೆಚ್. ಜನಾರ್ದನ, ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಬೀದರ್, ಇವರು ಮೇಲೆ ಹೇಳಿದ ಅಕ್ರಮ ಸಂಭಾವನೆ ಸ್ವೀಕರಿಸುವ ಕ್ರಿಮಿನಲ್ ಅಪರಾದವನ್ನು ಎಸಗಿದ್ದಾರೆಂದು ಸರ್ಕಾರಕ್ಕೆ ಮನವರಿಕೆಯಾಗಿದ್ದರಿಂದ , ಅವರ ಮೇಲೆ ಇಲಾಖಾ ವಿಚಾರಣೆ / ಕ್ರಿಮಿನಲ್ ಮೊಕದ್ದಮೆ ಬಾಕಿ ಇಟ್ಟು ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರಿ ಆದೇಶದ ದಿ. 22-11-2005 ರಲ್ಲಿ ಸದರಿಯವರನ್ನು ಸೇವೆಯಿಂದ ಅಮಾನತ್ತಿನಲ್ಲಿಟ್ಟು ಆದೇಶಿಸಲಾಗಿತ್ತು.

ಪ್ರಸ್ತುತ ಸರ್ಕಾರವು ಶ್ರೀ ಹೆಚ್. ಜನಾರ್ಧನ, ಕಾರ್ಯಪಾಲಕ ಇಂಜಿನಿಯರ್, ಇವರ ಅಮಾನತ್ತನ್ನು ತೆರವುಗೊಳಿಸುವ ಬಗ್ಗೆ ಸ್ವೀಕೃತವಾದ ಮನವಿಗಳನ್ನು ಪರಿಶೀಲಿಸಿ, ಸದರಿಯವರ ವಿರುದ್ಧ ಇಲಾಖಾ ವಿಚಾರಣೆ / ಕ್ರಿಮಿನಲ್ ಮೊಕದ್ದಮೆ ಬಾಕಿ ಇಟ್ಟು , ಅಮಾನತ್ತನ್ನು ತೆರವುಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 30 ಇಐನ್‌ಕ್ಯೂ 05 ಬೆಂಗಳೂರು, ದಿನಾಂಕ: 7ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) 1957 ರ ನಿಯಮ -10ನೇ ನಿಯಮದ (5) ನೇ ಉಪ ನಿಯಮ (ಸಿ) ಪ್ರಕಾರ ಶ್ರೀ ಹೆಚ್. ಜನಾರ್ಧನ, ಕಾರ್ಯಪಾಲಕ ಇಂಜಿನಿಯರ್, ಇವರ ಮೇಲೆ ಇಲಾಖಾ ವಿಚಾರಣೆ / ಕ್ರಿಮಿನಲ್ ಮೊಕದ್ದಮೆಯನ್ನು ಬಾಕಿ ಇಟ್ಟು, ಇವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ, ಇವರ ಸೇವೆಯನ್ನು ಇವರ ಮಾತೃ ಇಲಾಖೆಯಾದ ಲೋಕೋಪಯೋಗಿ ಇಲಾಖೆಗೆ ಹಿಂದಿರುಗಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 683 **ಎಸ್.ಸಿ. ಸುಂದರ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

**ವಿಷಯ:** ಶ್ರೀ ಕೆ.ಎಂ.ನಾರಾಯಣಸ್ವಾಮಿ, ಅಂದಿನ ಕಿರಿಯ ಇಂಜಿನಿಯರ್ (ಶಾಖಾಧಿಕಾರಿ), ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಮಡಿಕೇರಿ, ಕೊಡಗು ಜಿಲ್ಲೆ ಇವರ ಮೇಲಿನ ಇಲಾಖಾ ವಿಚಾರಣೆಯ ವರದಿಯ ನಂತರ ದೋಷಮುಕ್ತಗೊಳಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1) ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂ. ಕಂಪ್ಲೆಂಟ್:ಉಪಲೋಕ್: ಮೈಸ್-67:2000-01: ಎಆರ್ಎಲ್ಓ-4, ದಿ. 19-11-2002.
2) ಸರ್ಕಾರದ ಆದೇಶ ಸಂ. ಗ್ರಾಅಪ 17 ಇಐನ್‌ಕ್ಯೂ 2002, ದಿ. 17-2-2003.
3) ಮಾನ್ಯ ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂ. ಲೋಕ್ ಎಆರ್ಇ-1 ಇಐನ್‌ಕ್ಯೂ 140/02-03, ದಿ. 24-1-2006.

**ಪ್ರಸ್ತಾವನೆ:**

ಶ್ರೀ ಕೆ.ಎಂ.ನಾರಾಯಣಸ್ವಾಮಿ, ಅಂದಿನ ಕಿರಿಯ ಇಂಜಿನಿಯರ್ (ಶಾಖಾಧಿಕಾರಿ), ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಮಡಿಕೇರಿ, ಕೊಡಗು ಜಿಲ್ಲೆ ಇವರು ಕೊಡಗು ಜಿಲ್ಲಾ ಪಂಚಾಯತ್ ಉಪ ವಿಭಾಗದ ವ್ಯಾಪ್ತಿಯ ಕಡತನಾಳು ಗ್ರಾಮ ಪಂಚಾಯತಿ ಅಭಿವೃದ್ಧಿಗೆ ಸಂಬಂಧಪಟ್ಟಂತೆ ಇಬ್ನವಳವಾಡಿ ಜೋಯಿಕೇರಿ ರಸ್ತೆ ಅಭಿವೃದ್ಧಿ ಕಾಮಗಾರಿಯ ಕೆಲಸದ ಕಾಗದ ಪತ್ರಗಳನ್ನು ಮೇಲಾಧಿಕಾರಿಗಳಿಗೆ ಶಿಫಾರಸ್ಸು ಮಾಡಲು ಲೋಕೋಪಯೋಗಿ ಇಲಾಖೆಯ ಗುತ್ತಿಗೆದಾರರನ್ನು ಅಕ್ರಮ ಸಂಭಾವನೆ ನೀಡುವಂತೆ ಒತ್ತಾಯಿಸಿದ್ದಾರೆಂಬ ಆರೋಪವನ್ನು ಸದರಿ ಗುತ್ತಿಗೆದಾರರು ನೀಡಿದ ದೂರಿನ ಮೇರೆಗೆ ಲೋಕಾಯುಕ್ತ ಅಧಿಕಾರಿಗಳು ಶ್ರೀ ಕೆ.ಎಂ.ನಾರಾಯಣಸ್ವಾಮಿ, ಅಂದಿನ ಕಿರಿಯ ಇಂಜಿನಿಯರ್ (ಶಾಖಾಧಿಕಾರಿ), ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಮಡಿಕೇರಿ, ಕೊಡಗು ಜಿಲ್ಲೆ ಇವರ ವಿರುದ್ಧ ಲಂಚ ನಿರ್ಮೂಲನಾ ಕಾಯ್ದೆ 1988 ರ ರಿತ್ಯ ಪ್ರಕರಣವನ್ನು ದಾಖಲಿಸಿಕೊಂಡು, ದೂರುದಾರರಿಂದ ಅಕ್ರಮ ಸಂಭಾವನೆಯನ್ನು ಆರೋಪಿತ ನೌಕರರು ದಿ. 15-4-1999 ರಂದು ಸ್ವೀಕರಿಸುತ್ತಿದ್ದ ಹಣದ ಸಮೇತ ಟ್ರ್ಯಾಪ್ ಮಾಡಿ ಹಾಗೂ ಲೋಕಾಯುಕ್ತ ಕಾಯ್ದೆ 1984 ರ 7 (2) ರ ರಿತ್ಯ ಸ್ವಯಂ ತನಿಖೆ ನಡೆಸಿ, ಸದರಿ ಕಾಯ್ದೆಯ ಕಲಂ (3) ರ ಪ್ರಕಾರ ಸರ್ಕಾರಕ್ಕೆ ವರದಿ ಸಲ್ಲಿಸಿ, ಇವರ ಮೇಲೆ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಲೋಕಾಯುಕ್ತ ಕಾಯ್ದೆ 1984 ರ ಕಲಂ -14 (ಎ) ರಂತೆ ಲೋಕಾಯುಕ್ತಕ್ಕೆ ವಹಿಸುವಂತೆ ಮಾನ್ಯ ಲೋಕಾಯುಕ್ತರು ಮಾಡಿದ್ದ ಶಿಫಾರಸ್ಸಿನ ಪ್ರಸ್ತಾವನೆಯನ್ನು ಕರ್ನಾಟಕ ಲೋಕಾಯುಕ್ತದ ನಿಬಂಧಕರು ಸರ್ಕಾರಕ್ಕೆ ಮೇಲೆ ಓದಲಾದ ಕ್ರಮ ಸಂ. (1) ರ ಅ.ಸ. ಪತ್ರದ ಶಿಫಾರಸ್ಸನ್ನು ಸರ್ಕಾರವು ಪರಿಶೀಲಿಸಿ, ಸದರಿಯವರ ವಿರುದ್ಧ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ - 11ರ ವಿಧಿ ವಿಧಾನವನ್ನು ಅನುಸರಿಸಿ ಇಲಾಖಾ ವಿಚಾರಣೆ ನಡೆಸಲು ನಿಯಮ-14 ಎ ಪ್ರಕಾರ ಪ್ರಕರಣವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಮಾನ್ಯ ಲೋಕಾಯುಕ್ತರಿಗೆ ವಹಿಸಲಾಗಿತ್ತು.

ಪ್ರಕರಣದಲ್ಲಿ ಲೋಕಾಯುಕ್ತ ಹೆಚ್ಚುವರಿ ನಿಬಂಧಕರು ಇಲಾಖಾ ವಿಚಾರಣೆ ನಡೆಸಿ, ಸದರಿ ಆರೋಪಿತರ ಮೇಲಿನ ಆರೋಪಗಳು ರುಜುವಾತಾಗಿರುವುದಿಲ್ಲವೆಂದು ಸಲ್ಲಿಸಿರುವ ವರದಿಯನ್ನು ಅಗತ್ಯ ಕ್ರಮಕ್ಕಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪ್ರಕಾರ ಮಾನ್ಯ ಲೋಕಾಯುಕ್ತರು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ವರದಿಯಲ್ಲಿ ಸರ್ಕಾರವು ಪರಿಶೀಲಿಸಿ ಶ್ರೀ ಕೆ.ಎಂ.ನಾರಾಯಣಸ್ವಾಮಿ, ಅಂದಿನ ಕಿರಿಯ ಇಂಜಿನಿಯರ್ (ಶಾಖಾಧಿಕಾರಿ), ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ , ಮಡಿಕೇರಿ ಇವರನ್ನು ದೋಷಮುಕ್ತಗೊಳಿಸಲು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 17 ಇಐನ್‌ಕ್ಯೂ 02, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಕೆ.ಎಂ.ನಾರಾಯಣಸ್ವಾಮಿ, ಅಂದಿನ ಕಿರಿಯ ಇಂಜಿನಿಯರ್ (ಶಾಖಾಧಿಕಾರಿ), ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಮಡಿಕೇರಿ, ಕೊಡಗು ಜಿಲ್ಲೆ ಇವರು ಕೊಡಗು ಜಿಲ್ಲಾ ಪಂಚಾಯತ್ ಉಪ ವಿಭಾಗದ ವ್ಯಾಪ್ತಿಯ ಕಡತನಾಳು ಗ್ರಾಮ ಪಂಚಾಯತಿ ಅಭಿವೃದ್ಧಿಗೆ ಸಂಬಂಧಪಟ್ಟಂತೆ ಇಬ್ನವಳವಾಡಿ ಜೋಯಿಕೇರಿ ರಸ್ತೆ ಅಭಿವೃದ್ಧಿ ಕಾಮಗಾರಿಯ ಕೆಲಸದ ಕಾಗದ ಪತ್ರಗಳನ್ನು ಮೇಲಾಧಿಕಾರಿಗಳಿಗೆ ಶಿಫಾರಸ್ಸು ಮಾಡಲು

ಲೋಕೋಪಯೋಗಿ ಇಲಾಖೆಯ ಗುತ್ತಿಗೆದಾರರಿಂದ ಅಕ್ರಮ ಸಂಭಾವನೆ ಪಡೆದಿದ್ದಾರೆಂಬ ಆರೋಪ ವಿವರವಾದ ವಿಚಾರಣೆಯಲ್ಲಿ ರುಜುವಾತಾಗದಿರುವುದರಿಂದ ಸದರಿ ಆರೋಪವನ್ನು ಕೈಬಿಟ್ಟು ಅವರನ್ನು ದೋಷಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 723

**ಎಸ್.ಸಿ. ಸುಂದರ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

## FOREST, ECOLOGY AND ENVIRONMENT SECRETARIAT

**Subject:** Diversion of 0.742 ha. of forest land for Construction of proposed 220 KV DC line from proposed 400/220 KV Bastipura Station to existing 220/66 KV sub-station at Kadakola Sy.No.137 of Kurgalli Village in Kurgalli Reserve Forest, Mysore District.

**Read:** 1) Letter No.A5(7)GFL.CR.8/05-06,dated:25.1.2006 of Principal Chief Conservator of Forests, Bangalore.

2) Letter No. F.No.11-9/98-FC, dated 03-01-2005 of Government of India, Ministry of Environment and Forests, New Delhi.

**PREAMBLE:**

The Principal Chief Conservator of Forests, Bangalore vide his letter dated: 25-1-2006 read at (1) above has submitted a proposal for diversion of 0.742 ha. of forest land in Kurgalli Reserved Forests, Sy.No.137 of Kurgalli Village in Mysore District for construction of proposed 220 KV D/C line from proposed 400/220 KV Bastipura Station to existing 220/66 KV substation at Kadakola under the general approval accorded by Government of India subject to certain conditions

The Government of India, Ministry of Environment and Forests, New Delhi vide their letter dated:3-1-2005 read at (2) above has conveyed its general approval under Section 2 of Forest (Conservation)Act,1980 for diversion of land to Government Departments for certain activities.

The proposal has been examined in detail and hence the order.

**GOVERNMENT ORDER NO. FEE 17 FGL 2006, BANGALORE, DATED: 19th APRIL 2006**

In the circumstances explained in the preamble and in accordance with the general approval of Government of India in the letter dated: 3.1.2005, the Government are pleased to accord approval under section (2) of Forest (Conservation) Act 1980 for diversion of 0.742 ha. of forest land in Sy.No. 137 of Kurgalli Village in Kurgalli Reserve forest, Mysore District, for construction of proposed 220 KV D/C line from proposed 400/220 KV Bastipura Station to existing 220/66 KV substation at Kadakola in favour of Karnataka Power Transmission Corporation Ltd., subject to the following conditions:

1. The legal status of forest land shall remain unchanged.
2. The lessee shall pay lease rent as fixed by the Government from time to time.
3. The lease is for a period of 30 years.
4. The leased out area should be used for the purpose for which it is granted. In case the land is not used for the stipulated purpose within one year or when it is no longer needed for the stipulated purpose whichever is earlier the area should be forfeited to the Forest Department under section 82 of Karnataka Forest Act, 1963. The Conservator of Forests, Mysore Circle is authorized to take necessary action in this regard. No residential buildings shall be permitted in the proposed area.
5. Karnataka Forest Act 1963 and Rules 1969 will be applicable for any violation
6. The user agency has to pay the Net present value (NPV) fixed by Government vide Notification No. FEE 247 FGL 2002, dated: 17.1.2004
7. All the funds obtained as Net Present Value of diverted forest land should be deposited with Compensatory Afforestation Fund Management and Planning Authority (CAMPA).
8. The user agency shall ensure that there should be no damage to the available wildlife.
9. The user agency shall abide by all the conditions imposed upon by Government and Principal Chief Conservator of Forests.
10. Any other condition imposed by the Government of India/Government of Karnataka will have to be abided by the lessee.

By Order and in the name of the Governor of Karnataka,

P.R. 671

**S.R. VATSALA**

Under Secretary to Government

Forest, Ecology and Environment Department.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಮೈಸೂರು ಜಿಲ್ಲೆ ನಂಜನಗೂಡು ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗಕ್ಕೆ ಬಿಡುಗಡೆಯಾದ ಕೂಲಿಗಾಗಿ ಕಾಳು ಯೋಜನೆಯ ಅಕ್ಕಿ ವಿತರಣೆಯ ಅವ್ಯವಹಾರದಲ್ಲಿ ಭಾಗಿಯಾಗಿದ್ದಾರೆನ್ನಲಾದ ಅಧಿಕಾರಿ / ನೌಕರರ ವಿರುದ್ಧದ ಜಂಟಿ ಇಲಾಖಾ ವಿಚಾರಣೆಯ ವರದಿಯ ನಂತರ ದೋಷಮುಕ್ತಗೊಳಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಇವರ ಪತ್ರ ಸಂ. ಸಿಎಎಲ್:327:02-03, ದಿ. 21-12-2002.
2) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಮೈಸೂರು ಇವರ ಅ.ಸ. ಪತ್ರ ಸಂ. ಎ-1:ಸಿಬ್ಬಂದಿ:167:02-03, ದಿ. 23-12-2002.
3) ಸರ್ಕಾರದ ಆದೇಶ ಸಂ. ಗ್ರಾಅಪ : 18:ಇಎನ್‌ಕ್ಯೂ:02, ದಿ. 27-12-2002.
4) ಕಾರಣ ಕೇಳುವ ನೋಟೀಸಿನ ಸಮ ಸಂಖ್ಯೆಯ ದಿ. 23-03-2004
5) ಸರ್ಕಾರದ ಆದೇಶ ಸಂ. ಗ್ರಾಅಪ : 18:ಇಎನ್‌ಕ್ಯೂ:02, ದಿ. 24-7-2004.
6) ಸರ್ಕಾರದ ಆದೇಶ ಸಂ. ಗ್ರಾಅಪ : 18:ಇಎನ್‌ಕ್ಯೂ:02, ದಿ. 22-11-2004.
7) ವಿಚಾರಣಾಧಿಕಾರಿಗಳ ವರದಿಯ ದಿ. 30-11-2005.

**ಪ್ರಸ್ತಾವನೆ:**

ಮೈಸೂರು ಜಿಲ್ಲೆಗೆ ಬರಪರಿಹಾರ ಯೋಜನೆಯಡಿಯಲ್ಲಿ ಕೂಲಿಗಾಗಿ ಕಾಳು ಯೋಜನೆಯನ್ನು ಅನುಷ್ಠಾನಗೊಳಿಸಲು ನಂಜನಗೂಡು ತಾಲ್ಲೂಕು ಕಾಮಗಾರಿಗಾಗಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗಕ್ಕೆ ಬಿಡುಗಡೆ ಮಾಡಿದ ಅಕ್ಕಿಯನ್ನು ದಾಸ್ತಾನು ಮಾಡಲು ಸರ್ಕಾರಿ ಉಗ್ರಾಣದಲ್ಲಿ ಸ್ಥಳವಿದ್ದರೂ ಸಹ, ಹುಲ್ಲಹಳ್ಳಿ ಗ್ರಾಮದ ಖಾಸಗಿ ಗಿರಣಿಯಲ್ಲಿ 1677 ಕ್ವಿಂಟಾಲ್ ಅಕ್ಕಿಯನ್ನು ದಾಸ್ತಾನು ಮಾಡಿರುವುದನ್ನು ಲೋಕಾಯುಕ್ತ ಅಧಿಕಾರಿಗಳು ಪತ್ತೆ ಹಚ್ಚಿರುವ ವಿಷಯವು ದಿನಪತ್ರಿಕೆಗಳಲ್ಲಿ ಪ್ರಕಟವಾದ ನಂತರ ಮೈಸೂರು ಜಿಲ್ಲಾಧಿಕಾರಿಗಳು ಮೈಸೂರು ಉಪ ವಿಭಾಗಾಧಿಕಾರಿಗಳ ನೇತೃತ್ವದ ತನಿಖಾ ತಂಡದಿಂದ ತನಿಖೆ ಮಾಡಿಸಿ, ತನಿಖಾ ವರದಿಯ ಪ್ರಕಾರ ಶ್ರೀ ಯು.ಕೆ. ಬಸವಣ್ಣ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ನಂಜನಗೂಡು ಇವರು ಮೇಲಾಧಿಕಾರಿಗಳ ಆದೇಶವಿಲ್ಲದೆ ಮತ್ತು ನಿಯಮಗಳನ್ನು ಪಾಲಿಸದೆ ಖಾಸಗಿ ಗಿರಣಿಯಲ್ಲಿ ಅಕ್ರಮವಾಗಿ ಅಕ್ಕಿಯನ್ನು ದಾಸ್ತಾನು ಮಾಡಿರುವುದು ಮತ್ತು ಮತ್ತಿತರ ಅಕ್ರಮವೆಸಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವ ಬಗ್ಗೆ ಮೈಸೂರು ಜಿಲ್ಲೆಯ ಜಿಲ್ಲಾಧಿಕಾರಿಯವರು ಮತ್ತು ಮೈಸೂರು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು ಮೇಲೆ ಓದಲಾದ ಕ್ರಮ ಸಂಖ್ಯೆ (1) ಮತ್ತು (2) ರ ಪತ್ರಗಳ ಪ್ರಕಾರ ಸರ್ಕಾರಕ್ಕೆ ವರದಿ ಮಾಡಿ ಈ ಪ್ರಕರಣಕ್ಕೆ ಒಳಗೊಂಡಿರುವ ಶ್ರೀ ಯು.ಕೆ. ಬಸವಣ್ಣ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ನಂಜನಗೂಡು ಇವರ ಮೇಲೆ ಶಿಸ್ತು ಕ್ರಮ ಕೈಗೊಳ್ಳುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದರು. ಹಾಗೂ ಈ ಪ್ರಕರಣದಲ್ಲಿ ಒಳಗೊಂಡಿದ್ದಾರೆನ್ನಲಾದ ಉಗ್ರಾಣಪಾಲಕ ಮತ್ತು ಕಿರಿಯ ಇಂಜಿನಿಯರ್ ರವರನ್ನು ಸೇವೆಯಿಂದ ಅಮಾನತ್ತುಗೊಳಿಸಿರುವುದಾಗಿ ಮೈಸೂರು ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು ವರದಿ ಮಾಡಿದ್ದರು.

ಸರ್ಕಾರವು ವರದಿಯನ್ನು ಪರಿಶೀಲಿಸಿ, ಶ್ರೀ ಯು.ಕೆ. ಬಸವಣ್ಣ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ , ನಂಜನಗೂಡು ಇವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ. (3) ರ ಆದೇಶದಲ್ಲಿ ಅಮಾನತ್ತಿನಲ್ಲಿರಿಸಲಾಗಿತ್ತು.

ತದನಂತರ, ಈ ಪ್ರಕರಣದ ಆರೋಪಿತರುಗಳಾದ ಶ್ರೀ ಯು.ಕೆ.ಬಸವಣ್ಣ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಶ್ರೀ ಬಿ.ಆರ್. ರವಿಕುಮಾರ್, ಅಂದಿನ ಕಿರಿಯ ಇಂಜಿನಿಯರ್ ಮತ್ತು ಶ್ರೀ ಶಂಕರ್, ಅಂದಿನ ದ್ವಿತೀಯ ದರ್ಜೆ ಸಹಾಯಕ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ , ನಂಜನಗೂಡು ಇವರುಗಳಿಗೆ ಆರೋಪ ಪಟ್ಟಿಯನ್ನು ಕ್ರಮ ಸಂ. (4) ರ ಪ್ರಕಾರ ಜಾರಿ ಮಾಡಿ , ಲಿಖಿತ ಹೇಳಿಕೆ ಪಡೆದ ನಂತರ ಈ ಪ್ರಕರಣದ ಸತ್ಯಾಸತ್ಯತೆಯನ್ನು ಅರಿಯುವ ಸಲುವಾಗಿ ವಿಚಾರಣಾಧಿಕಾರಿಯಾಗಿ ಶ್ರೀ ಎಸ್. ಇಂದುಧರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ಮೇಲೆ ಓದಲಾದ ಕ್ರಮ ಸಂ. (5) ರ ಆದೇಶದಲ್ಲಿ ನೇಮಿಸಲಾಗಿತ್ತು.

ಶ್ರೀ ಯು.ಕೆ. ಬಸವಣ್ಣ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ , ನಂಜನಗೂಡು ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರ ಅಮಾನತ್ತನ್ನು ತೆರವುಗೊಳಿಸಿ, ಅವರ ಮಾತೃ ಇಲಾಖೆಯಾದ ಲೋಕೋಪಯೋಗಿ ಇಲಾಖೆಗೆ ಮೇಲೆ ಓದಲಾದ ಕ್ರಮ ಸಂ. (6) ರ ಆದೇಶದಲ್ಲಿ ಹಿಂದಿರುಗಿಸಲಾಗಿದೆ.

ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಿ, ಸದರಿ ಆರೋಪಿತರುಗಳ ಮೇಲಿನ ಎಲ್ಲಾ ಆರೋಪಗಳು ರುಜುವಾತಾಗಿರುವುದಿಲ್ಲವೆಂದು ಮೇಲೆ ಓದಲಾದ ಕ್ರಮ ಸಂ. (7) ರಲ್ಲಿ ವಿಚಾರಣಾ ವರದಿ ಸಲ್ಲಿಸಿದ್ದರು.

ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಕೂಲಂಕಶವಾಗಿ ಪರಿಶೀಲಿಸಿ, ವಿಚಾರಣಾ ವರದಿಯನ್ನು ಒಪ್ಪಿ, ಈ ಪ್ರಕರಣದಲ್ಲಿ ಒಳಗೊಂಡಿರುವ ಅಧಿಕಾರಿ / ನೌಕರರುಗಳನ್ನು ದೋಷಮುಕ್ತಗೊಳಿಸುವ ಬಗ್ಗೆ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 18 ಇಎನ್‌ಕ್ಯೂ 02, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2006**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮೈಸೂರು ಜಿಲ್ಲೆ, ನಂಜನಗೂಡು ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗಕ್ಕೆ ಕೂಲಿಗಾಗಿ ಕಾಳು ಯೋಜನೆಯನ್ನು ಅನುಷ್ಠಾನಗೊಳಿಸಲು ಬಿಡುಗಡೆಗೊಳಿಸಿದ್ದ ಅಕ್ಕಿಯನ್ನು ಅಕ್ರಮ ದಾಸ್ತಾನು ಅವ್ಯವಹಾರಗಳಲ್ಲಿ ಭಾಗಿಯಾಗಿದ್ದಾರೆನ್ನಲಾದ ಆರೋಪಗಳು ವಿವರವಾದ ವಿಚಾರಣೆಯಲ್ಲಿ ರುಜುವಾತಾಗದಿರುವುದರಿಂದ ಈ ಬಗ್ಗೆ ಶ್ರೀ ಯು.ಕೆ. ಬಸವಣ್ಣ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಶ್ರೀ ಬಿ.ಆರ್. ರವಿಕುಮಾರ್, ಅಂದಿನ ಕಿರಿಯ ಇಂಜಿನಿಯರ್ ಮತ್ತು ಶ್ರೀ ಶಂಕರ, ಅಂದಿನ ದ್ವಿತೀಯ ದರ್ಜೆ ಸಹಾಯಕ, ಪಂಚಾಯತ್ ರಾಜ್

ಇಂಜಿನಿಯರಿಂಗ್ ಉಪ ವಿಭಾಗ , ನಂಜನಗೂಡು ಇವರುಗಳ ಮೇಲೆ ಮಾಡಲಾಗಿರುವ ಆರೋಪಗಳನ್ನು ಕೈಬಿಟ್ಟು ಅವರುಗಳನ್ನು ದೋಷಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 712

**ಎಸ್.ಸಿ. ಸುಂದರ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

**ವಿಷಯ:** ಹೆಚ್.ಕೆ.ಡಿ.ಬಿ ಮಂಡಳಿಯಿಂದ ಕೊಪ್ಪಳ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗಕ್ಕೆ ಬಿಡುಗಡೆಯಾದ ಅನುದಾನದಲ್ಲಿ ಹಣ ದುರುಪಯೋಗಕ್ಕೆ ಸಂಬಂಧಿಸಿದ ಅಧಿಕಾರಿ /ನೌಕರರುಗಳ ಮೇಲಿನ ಆರೋಪಗಳ ಬಗ್ಗೆ , ವಿವರವಾದ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳನ್ನು ನೇಮಿಸುವ - ಆದೇಶ.

**ಓದಲಾಗಿದೆ:**
1) ಕಾರ್ಯದರ್ಶಿಗಳು, ಹೈದರಾಬಾದ್ - ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇವರ ಪತ್ರ ಸಂ.ಹಕಾನಿ:ಹಬಿಪ:32:2001-02, ದಿ. 10-3-2003.
2) ಅ.ಸ.ಪ. ಸಂಖ್ಯೆ. ಗ್ರಾಅಪ 06 ಇಎನ್‌ಕ್ಯೂ 03, ದಿ. 1-12-03.
3) ಮುಖ್ಯಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರ ಪತ್ರ ಸಂ:ಜಿಪಂಕೊ/ಸಿಸಿಎ/ 7/03-04 /999, ದಿ.2-7-2005.
4) ಅ.ಸ. ಪತ್ರ ಸಂಖ್ಯೆ. ಗ್ರಾಅಪ 06 ಇಎನ್‌ಕ್ಯೂ 03, ದಿ. 12-7-2005.
5) ಮುಖ್ಯಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರ ಪತ್ರ ಸಂ:ಜಿಪಂಕೊ/ ಸಿಸಿಎ/7/03-04 /1254, ದಿ.3-8-2005.
6) ಕಾರಣ ಕೇಳುವ ನೋಟೀಸ್ ಸಂಖ್ಯೆ. ಗ್ರಾಅಪ 6 ಇಎನ್‌ಕ್ಯೂ 03, ದಿ. 9-9-05.
7) ಆರೋಪಿತ ಅಧಿಕಾರಿಗಳ ಲಿಖಿತ ಹೇಳಿಕೆ ದಿ. 4-10-05, 15-10-05 ಮತ್ತು 17-10-05.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ. (1) ರ ದಿ. 10-3-03 ರ ಪತ್ರದಲ್ಲಿ ಕಾರ್ಯದರ್ಶಿ, ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇವರು HKDB ಮಂಡಳಿಯಿಂದ 1990-91 ರಿಂದ 2000-01 ರವರೆಗೆ ಕಾಇಂ, ಜಿಪಂಇಂ ಉಪ ವಿಭಾಗ, ಕೊಪ್ಪಳ ಇವರಿಗೆ ಬಿಡುಗಡೆ ಮಾಡಿದ ಹಣ , ಮಾಡಿದ ವೆಚ್ಚ ಮತ್ತು ಉಳಿದ ಸಿಲ್ಕಿನ ವ್ಯತ್ಯಾಸದ ಸಂಕ್ಷಿಪ್ತ ತಪಾಸಣಾ ವರದಿಯಲ್ಲಿ ನಮೂದಿಸಿರುವ 1 ರಿಂದ 11 ಅಂಶಗಳ ಬಗ್ಗೆ ನಡೆದಿದೆ ಎನ್ನಲಾದ ಅಕ್ರಮಗಳ ಬಗ್ಗೆ ಖುದ್ದಾಗಿ ಪರಿಶೀಲನೆ ಮಾಡಿ ಇದಕ್ಕೆ ಸಂಬಂಧಪಟ್ಟ ಎಲ್ಲಾ ಅಧಿಕಾರಿ / ನೌಕರರ ಮೇಲೆ ಇಲಾಖಾ ವಿಚಾರಣೆ ನಡೆಸಲು ದೋ.ಪಟ್ಟಿಯನ್ನು ಸಲ್ಲಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ.(2) ರ ದಿ. 1-12-03 ರಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರನ್ನು ಕೋರಲಾಗಿತ್ತು. ಈ ಬಗ್ಗೆ ಸದರಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ದಿ. 2-7-05ರ ಪತ್ರದಲ್ಲಿ 9ನೇ ಅಂಶ, ಶ್ರೀ ವೀರಭದ್ರಯ್ಯ, ಪ್ರ.ದ.ಸ. ಸ್ಟೋರ್‌ಕೀಪರ್ ಇವರ ಬಗ್ಗೆ ಮಾತ್ರ ಇಲಾಖಾ ವಿಚಾರಣೆ ಮಾಡಿ ವರದಿ ಸಲ್ಲಿಸಿ, HKDB ಮಂಡಳಿಯ ದಿ.10-3-2003 ರ ಪತ್ರದಲ್ಲಿ ತಿಳಿಸಿರುವಂತೆ ಕಾಮಗಾರಿಗಳಲ್ಲಿ ನಡೆದಿದೆ ಎನ್ನಲಾದ ಉಳಿದ 10 ಅಂಶಗಳ ಬಗ್ಗೆ ಏನನ್ನೂ ಹೇಳಿರಲಿಲ್ಲ.

ಆದ್ದರಿಂದ, HKDB ಮಂಡಳಿಯ ದಿ. 10-3-2003 ರ ಪತ್ರದಲ್ಲಿ ತಿಳಿಸಿರುವಂತೆ ಕಾಮಗಾರಿಗಳಲ್ಲಿ ನಡೆದಿದೆ ಎನ್ನಲಾದ ಉಳಿದ 10 ಅಂಶಗಳ ಬಗ್ಗೆ ಸಂಬಂಧಪಟ್ಟ ಎಲ್ಲಾ ಕಾರ್ಯಪಾಲಕ ಇಂಜಿನಿಯರ್ / ಸಹಾಯಕ ಕಾರ್ಯಪಾಲಕ ಇಂಜಿನಿಯರ್ /ಅಧಿಕಾರಿ / ನೌಕರರ ಮೇಲೆ ಶಿಸ್ತು ಕ್ರಮ ಕೈಗೊಳ್ಳಲು ತಕ್ಷಣ ಕರಡು ದೋಷಾರೋಪಣ ಪಟ್ಟಿ, ಅನುಬಂಧ 1 ರಿಂದ 4 ನ್ನು ಸಲ್ಲಿಸುವಂತೆ ಮೇಲೆ ಓದಲಾದ ಕ್ರಮ ಸಂ. (4) ರ ಅ.ಸ. ಪತ್ರ ದಿ. 12-7-2005 ರಲ್ಲಿ ಕೋರಲಾಗಿತ್ತು.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರು ಶ್ರೀ ವೀರಭದ್ರಯ್ಯ, ಪ್ರ.ದ.ಸ. ಸ್ಟೋರ್‌ಕೀಪರ್ ಇವರ ಮೇಲೆ ಇಲಾಖಾ ವಿಚಾರಣೆ ಮಾಡಿ ಸಲ್ಲಿಸಿದ್ದ ವರದಿಯಲ್ಲಿ ಉಗ್ರಾಣ ದಾಸ್ತಾನಿನಲ್ಲಿ ಸಾಮಗ್ರಿಗಳ ಕೊರತೆಯಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟದ ಮೊತ್ತ ಒಟ್ಟು ರೂ. 6,95,185-00 ಗಳನ್ನು ಅವರ ವೇತನದಿಂದ ಕರ್ನಾಟಕ ಸರ್ಕಾರಿ ಸೇವಾ (ವ.ನಿ.ಮೇ.) 1957 ರ ನಿಯಮ 8 (iv) ರಂತೆ ವಸೂಲ್ಮಾಡಲು ಮತ್ತು ಸದರಿ ನಿಯಮ (viii) ರಂತೆ ಕೆಲಸದಿಂದ ವಜಾ ಮಾಡಲು ಮಾಡಿರುವ ಶಿಫಾರಸ್ಸಿನಂತೆ ಶ್ರೀ ವೀರಭದ್ರಯ್ಯ, ಪ್ರ.ದ.ಸ. ಇವರಿಗೆ ದಂಡನೆ ವಿಧಿಸಲು ಅವರ ಮಾತೃ ಇಲಾಖೆಯಾದ ಲೋಕೋಪಯೋಗಿ ಇಲಾಖೆಯನ್ನು ದಿ. 4-8-2005 ರ ಅ.ಟಿ.ಯಲ್ಲಿ ಕೋರಲಾಗಿತ್ತು. ಲೋಕೋಪಯೋಗಿ ಇಲಾಖೆಯು ಜ್ಞಾಪನ ಪತ್ರ ಸಂ. ಪಂರಾಇಂ ಉವಿಯ:ಸಿಬ್ಬಂದಿ:ವಜಾ:1037, ದಿ. 6-3-2006 ರಲ್ಲಿ ಸೇವೆಯಿಂದ ವಜಾ ಮಾಡಿರುತ್ತಾರೆ.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರು ಈ ಪ್ರಕರಣದಲ್ಲಿ ಭಾಗಿಯಾದ ಇನ್ನಿತರ ಇಂಜಿನಿಯರ್‌ಗಳಾದ 1) ಶ್ರೀ ರಾಜಶೇಖರಯ್ಯ, ಅಂದಿನ ಸಕಾಇಂ, 2) ಶ್ರೀ ಪಂಪಾಪತಿ, ಅಂದಿನ ಸಕಾಇಂ, ಮತ್ತು 3) ಶ್ರೀ ಟಿ. ಜಯಾನಂದ, ಅಂದಿನ ಸಕಾಇಂ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಕೊಪ್ಪಳ ಇವರುಗಳ ವಿರುದ್ಧ ಆರೋಪ ಪಟ್ಟಿ ಅನುಬಂಧ-1 ರಿಂದ 4 ನ್ನು ತಯಾರಿಸಿ ಸಂಬಂಧಿಸಿದ ದಾಖಲೆಗಳೊಂದಿಗೆ ಮೇಲೆ ಓದಲಾದ ಕ್ರಮ ಸಂ. (5) ರ ದಿ: 3-8-2005 ರಂದು ಪ್ರಸ್ತಾವನೆ ಸಲ್ಲಿಸಿದ್ದರು. ಸದರಿ ಪ್ರಸ್ತಾವನೆಯನ್ನು ಕೂಲಂಕುಶವಾಗಿ ಪರಿಶೀಲಿಸಿ, ಸದರಿಯವರುಗಳ ಮೇಲೆ ನಿಯಮಾನುಸಾರ ಶಿಸ್ತು ಕ್ರಮ ಕೈಗೊಳ್ಳಲು ಕ.ಸ.ಸೇ (ವ.ನಿ.ಅ.) ನಿಯಮ 1957ರ ನಿಯಮ 11 ರನ್ವಯ ಇವರುಗಳಿಗೆ ಇಲಾಖಾ ವಿಚಾರಣೆ ಹೂಡಿ ಮೇಲೆ ಓದಲಾದ ಕ್ರಮ ಸಂ. (6) ರ ದಿ. 9-9-2005 ರಲ್ಲಿ ಕಾರಣ ಕೇಳುವ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿಮಾಡಲಾಗಿತ್ತು.

ಸದರಿ ಅಧಿಕಾರಿಗಳು ಕಾರಣ ಕೇಳುವ ನೋಟೀಸಿಗೆ ಮೇಲೆ ಓದಲಾದ ಕ್ರಮ ಸಂ.(7) ರಲ್ಲಿ ಲಿಖಿತ ಉತ್ತರವನ್ನು ಸಲ್ಲಿಸಿ, ತಮ್ಮ ಮೇಲಿನ ಎಲ್ಲಾ ಆರೋಪಗಳನ್ನು ನಿರಾಕರಿಸಿದ್ದಾರೆ. ಆದರೆ, ಅವರು ಸಲ್ಲಿಸಿರುವ ಲಿಖಿತ ಉತ್ತರ ಹೇಳಿಕೆಗಳನ್ನು ಪರಿಶೀಲಿಸಲಾಗಿ,

ಅವು ಸಮರ್ಪಕವಾಗಿಲ್ಲವೆಂದು ಕಂಡು ಬಂದಿರುವುದರಿಂದ ಮತ್ತು ಆಪಾದಿತರು ಆರೋಪಿತ ದುರ್ನಡತೆಯನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡು ಬರುವುದರಿಂದ ಆಪಾದಿತರ ಮೇಲಿನ ಆಪಾದನೆಗಳ ಬಗ್ಗೆ ಸತ್ಯಾಂಶಗಳನ್ನು ಅರಿಯಲು ಪ್ರಕರಣದಲ್ಲಿ ಕನಾಸೇ (ವ.ನಿ.ಮೇ) 1957 ರ ನಿಯಮ 11 ರಲ್ಲಿ ವಿವರವಾದ ವಿಚಾರಣೆ ನಡೆಸಲು , ಸದರಿ ನಿಯಮ 11 (2) ರ ರೀತ್ಯ ಶ್ರೀ ಟಿ.ಜೆ.ಮರಿಯಪ್ಪ , ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ನಿಯಮ 11 (5) ರ ರಿತ್ಯ ಸಹಾಯಕ ಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಕೊಪ್ಪಳ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 06 ಇಎನ್‌ಕ್ಯೂ 03 (P), ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2006**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೇಲಿನ ಆಪಾದನೆಗಳಿಗೆ ಸಂಬಂಧಿಸಿದಂತೆ 1) ಶ್ರೀ ರಾಜಶೇಖರಯ್ಯ, ಅಂದಿನ ಸಕಾಇಂ, 2) ಶ್ರೀ ಪಂಪಾಪತಿ, ಅಂದಿನ ಸಕಾಇಂ, ಮತ್ತು 3) ಶ್ರೀ ಟಿ. ಜಯಾನಂದ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ಗಳು , ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಕೊಪ್ಪಳ ಇವರುಗಳ ಮೇಲೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11ರಲ್ಲಿ ನಿಗದಿಪಡಿಸಲಾದ ವಿಧಿವಿಧಾನಗಳನ್ನು ಅನುಸರಿಸಿ ನಿಯಮ 13 ರನ್ವಯ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ನಿಯಮ 11(2)ರ ರಿತ್ಯ ಶ್ರೀ ಟಿ.ಜಿ. ಮರಿಯಪ್ಪ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ.648, 2ನೇ ಕ್ರಾಸ್, 8ನೇ ಮೈನ್, ಬಸವೇಶ್ವರನಗರ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ನಿಯಮ 11(5)ರ ರೀತ್ಯ ಸಹಾಯಕ ಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಕೊಪ್ಪಳ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಸರ್ಕಾರವು ಆದೇಶಿಸಿದೆ.

ಈ ವಿಚಾರಣೆಯನ್ನು 3 ತಿಂಗಳೊಳಗಾಗಿ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ನಿಯಮಾನುಸಾರ ನಿಗದಿತ ಸಂಭಾವನೆಯನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 722

**ಎಸ್.ಸಿ. ಸುಂದರ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

## ಇಂಧನ ಸಚಿವಾಲಯ

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಅದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಎಸ್‌ಕೆಎಂ/2005/655 ದಿನಾಂಕ: 17.3.2006.

2) ದಿನಾಂಕ: 25.3.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: Shree Krishna Minerals ಕಂಪನಿಗೆ ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಹನುಮಸಾಗರ ಎಂಬಲ್ಲಿ 3.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯ ಪವನ ವಿದ್ಯುತ್ ಯೋಜನೆ ಹಂಚಿಕೆಯ ಕ್ರಮ ಸಂಖ್ಯೆ: 54 ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 152 ಎನ್‌ಸಿಇ 2006, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2006**

ಮೆ:: Shree Krishna Minerals ಕಂಪನಿಗೆ ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಹನುಮಸಾಗರ ಎಂಬಲ್ಲಿ 3.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ

ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.

4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ ಕಂದಾಯ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಪ್ರಸ್ತುತ ಹಂಚಿಕೆ ಸಮಿತಿ ಸಭೆಯಲ್ಲಿ ಶಿಫಾರಸ್ಸು ಮಾಡಿರುವ ಕಂಪನಿಗಳಿಗೆ 2006–07 ನೇ ಸಾಲಿನಲ್ಲಿ 100 ಮೆಗಾ ವ್ಯಾಟ್‌ಗೆ ಮೀರದಂತೆ ಸಂಬಂಧಪಟ್ಟ ವಿದ್ಯುತ್ ಸರಬರಾಜು ಕಂಪನಿಗಳೊಂದಿಗೆ ಮೊದಲ ಅರ್ಜಿದಾರರಿಗೆ ಆದ್ಯತೆ ಮೇಲೆ ವಿದ್ಯುತ್ ಖರೀದಿ ಒಡಂಬಡಿಕೆಯನ್ನು (ಪಿ.ಪಿ.ಎ) ಮಾಡಿಕೊಳ್ಳತಕ್ಕದ್ದು.
12. ಎಲ್ಲಾ ಅಭಿವೃದ್ಧಿದಾರರು ಖುದ್ದಾಗಿ ಯೋಜನೆಗಳನ್ನು ಯಂತ್ರೋಪಕರಣಗಳೊಂದಿಗೆ ಅನುಷ್ಠಾನಗೊಳಿಸಬೇಕು.

ಕರ್ನಾಟಕ ರಾಜ್ಯ ಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 751 **ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಅದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಜೆಹೆಚ್‌ಪಿಪಿಪಿಎಲ್/2006/202 ದಿನಾಂಕ: 20.1.2006.

2) ದಿನಾಂಕ: 25.3.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: J.H. Patel Power Projects (P) Limited ಕಂಪನಿಗೆ ಶಿವಮೊಗ್ಗ ಮತ್ತು ದಾವಣಗೆರೆ ಜಿಲ್ಲೆಗಳಲ್ಲಿ 30.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯ ಪವನ ವಿದ್ಯುತ್ ಯೋಜನೆ ಹಂಚಿಕೆಯ ಕ್ರಮ ಸಂಖ್ಯೆ: 27 ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

